## 5 ಆಯುರ್ದಾಯ (ತಿದ್ದಿದ ದ್ವಿತೀಯಾವೃತ್ತಿ)

ಆಯುರ್ದಾಯ ವಿಭಾಗ, ಮಾರಕಸ್ಥಾನಗಳು, ಮರಣಹೇತು, ಬಾಲಾರಿಷ್ಟ, ಅರಿಷ್ಟಭಂಗಯೋಗಗಳು, ನಿರ್ಯಾಣರಾಶಿಹೇತು, ನಿರ್ಯಾಣಗ್ರಹ, ಯೋಗಜಾಯು, ಅಲ್ಪಾಯು ಮಧ್ಯಾಯು, ದೀರ್ಘಾಯು, ಪೂರ್ಣಾಯು ಇತ್ಯಾದಿ ಆಯುರ್ದಾಯ ವಿಚಾರ, ಅಪಘಾತ, ಅಪಮೃತ್ಯು ಅಕಾಲಮರಣ, ಆತ್ಮಹತ್ಯೆ, ಕೊಲೆ, ವಿಚಿತ್ರಮರಣಯೋಗ ಇತ್ಯಾದಿ ಮಾದರಿ ಜಾತಕದೊಂದಿಗೆ ವಿವರಿಸಿ ಬರೆದಿರುತ್ತದೆ. ದ್ರೇಕ್ಕಾಣಹೇತು, ಮರಣಕಾಲ, ಮರಣಹೇತು, ಮಾರಕದಶಾಭುಕ್ತಿಗಳು, ಮರಣಭೂಮಿ, ಮಾರಕವಿಚಾರ, ಶವಪರಿಣಾಮ, ಪೂರ್ವಜನ್ಮಜ್ಞಾನ, ಪರಲೋಕಪ್ರಾಪ್ತಿ, ಮೋಕ್ಷಯೋಗ ಇತ್ಯಾದಿ ಆಯುರ್ದಾಯ ವಿಚಾರ ಈ ಗ್ರಂಥವು ಆಧಾರಶ್ಲೋಕ ಮತ್ತು 108 ಮಾದರಿ ಜಾತಕಗಳಿಂದ ವಿವರಿಸಿ ಬರೆದಿರುತ್ತದೆ. ಆಯುರ್ದಾಯ ನಿರ್ಣಯಕ್ಕೆ ಉಪಯುಕ್ತ ಆಗುವಂತೆ ಪ್ರಶ್ನಮಾರ್ಗ ಗ್ರಂಥದ ಹತ್ತನೇ ಅಧ್ಯಾಯ-ನಿರ್ಯಾಣ ಕಾಲ ಚಿಂತನೆ ನಿರ್ಯಾಣಗ್ರಹ ಗುಳಿಕ ಮತ್ತು ಲಗ್ನಚಿಂತನೆ ಇತ್ಯಾದಿ ವಿಚಾರ ಮತ್ತು ಹನ್ನೊಂದನೇ ಅಧ್ಯಾಯ-ನಿರ್ಯಾಣ ಹೇತು, ಗ್ರಹರ ಧಾತ್ವಾದಿಕಾರಕತ್ವ, ರೋಗನಿರ್ಣಯ, ಬಾಧಾಕೃತಹೇತು ಇತ್ಯಾದಿ ಪ್ರಶ್ನವಿಚಾರ ವಿವರಣೆಯಿಂದ ಕೂಡಿದ ಉಪಯುಕ್ತ ಗ್ರಂಥ

**ಪುಟ: 144** ಬೆಲೆ : ರೂ. **40-00**

## 9 ದೈವಜ್ಞ ವರಾಹಮಿಹಿರ ಕೃತ ಲಘು ಜಾತಕ

ದೈವಜ್ಞ ವರಾಹಮಿಹಿರಾಚಾರ್ಯ ಕೃತ ಲಘುಜಾತಕ ಗ್ರಂಥವು ಜ್ಯೋತಿಷಶಾಸ್ತ್ರದ ಅಧ್ಯಯನಕ್ಕೆ, ಬೃಹಜ್ಜಾತಕದಂತೆ ಅತ್ಯಂತ ಉಪಯುಕ್ತ ಗ್ರಂಥ ಆಗಿರುತ್ತದೆ. ರಾಶಿಯ ಗುಣಧರ್ಮಗಳು, ಗ್ರಹಸ್ವರೂಪ, ಕಾರಕತ್ವ, ಗ್ರಹಮಿತ್ರತ್ವಾದಿ, ಆಧಾನಕುಂಡಲಿ, ಸ್ತ್ರೀ-ಪುರುಷ-ಯಮಳಾದಿ ಜನನ, ಜನ್ಮಕಾಲ ಲಕ್ಷಣಾದಿ, ಸದ್ಯೋರಿಷ್ಟ, ಅರಿಷ್ಟಭಂಗ, ಆಯುರ್ದಾಯ, ದಶಾಂತರ್ದಶಾ, ಅಷ್ಟಕವರ್ಗ, ಚಾಂದ್ರಯೋಗ, ಪ್ರವ್ರಜ್ಯಾಯೋಗ, ಭಾವಸ್ಥಿತ ಗ್ರಹಫಲ, ರಾಜಯೋಗ, ಆಶ್ರಯಯೋಗ, ದಲಯೋಗ, ಆಕೃತಿಯೋಗ, ಸಂಖ್ಯಾಯೋಗ ಮತ್ತು ಯೋಗಜಫಲ, ಸ್ತ್ರೀ ಜಾತಕವಿಚಾರ, ನಿರ್ಯಾಣಾಧ್ಯಾಯ ಮತ್ತು ನಷ್ಟಜಾತಕ ಶೋಧನ ಇತ್ಯಾದಿ ವಿಚಾರ ವಿವರಣೆಯಿಂದ ಕೂಡಿರುತ್ತದೆ.

ಪರಾಶರಮುನಿ ಪ್ರಣೀತ ಉಡುದಾಯ ಪ್ರದೀಪ ಅಥವಾ ಲಘು ಪರಶರೀ ಗ್ರಂಥದ ಮೂಲಶ್ಲೋಕ ಅನುವಾದವನ್ನು ಮತ್ತು ದ್ವಾದಶಲಗ್ನದ ಫಲಾಫಲಚಿಂತನೆಗೆ ಜಾತಕ ಚಂದ್ರಿಕಾ ಗ್ರಂಥದಲ್ಲಿ ಹೇಳಿದ ಗ್ರಹರ ಶುಭಾಶುಭತ್ವ ವಿಚಾರಾದಿಗಳಿಂದ ಕೂಡಿದ ಉಪಯುಕ್ತ ಜ್ಯೋತಿಷಗ್ರಂಥ.

**ಪುಟ : 108** ಬೆಲೆ : ರೂ. **27-00**

## 10 ದೈವಜ್ಞ ಕಲ್ಯಾಣವರ್ಮ ವಿರಚಿತ - ಸಾರಾವಲೀ (ಪ್ರಥಮ ಭಾಗ)

ದೈವಜ್ಞ ಕಲ್ಯಾಣವರ್ಮ ವಿರಚಿತ ಸಾರಾವಲೀ ಗ್ರಂಥವು ಜ್ಯೋತಿಷಶಾಸ್ತ್ರದ ಅಧ್ಯಯನಕ್ಕೆ

# JYOTISH-BODHINEE

(4th Edition)

By

**B. G. ACHARYA**

With the foreword and Blessings of

**VAIDYAGURU M. R. BHAT**

**1995**

**Rs. 32-00**

**Jyotish Bodhinee**—A primer in Astrology for beginers
in Kannada Pages 8+148



Price : 32/-

| | |
|---|---|
| First Edition— | 1966 |
| Second Edition— | 1982 |
| Third Edition — | 1987 |
| Fourth Edition— | 1995 |

Publishers : GAJANANA PRAKASHAN
Kamadhenu Pharmacy,
G. H. S. Cross Road,
Mangalore-575 001.

Printers : Kamadhenu Printers,
G. H. S. Cross Road,
Mangalore-575 001.

# ಜ್ಯೋತಿಷಬೋಧಿನೀ

ಗ್ರಂಥಕರ್ತರು
ಬಿ. ಜಿ. ಆಚಾರ್ಯ

ವೈದ್ಯಗುರು ಎಂ. ಆರ್. ಭಟ್, ಮಂಗಳೂರು-2.
ಇವರ ಆಶೀರ್ವಾದೊಕ್ತ ಮುನ್ನುಡಿ

ತಿದ್ದಿದ ಚತುರ್ಥಾವೃತ್ತಿ
1 9 9 5

ಪ್ರಕಾಶಕರು
ಗಜಾನನ ಪ್ರಕಾಶನ
ಕಾಮಧೇನು ಫಾರ್ಮಸಿ
ಗಣಪತಿ ಹೈಸ್ಕೂಲ್ ಕ್ರೋಸ್ ರೋಡ್
ಮಂಗಳೂರು-575 001.

ಬೆಲೆ: ರೂ. 32-00

# ಮುನ್ನುಡಿ

ಈ ಚಿಕ್ಕ ಜ್ಯೋತಿಷ ಗ್ರಂಥಕ್ಕೆ ಮುನ್ನುಡಿಯು ಅಗತ್ಯವಲ್ಲ. ಆದರೂ ಬಹುಕಾಲ ಈ ಕ್ಷೇತ್ರದಲ್ಲಿ ಇದ್ದವನೊಬ್ಬನಿಂದ ನಿರೋಪಿತವಾದ ಒಂದೆರಡು ಮಾತುಗಳು ನಿಜವಾಗಿ ಸಮಾಧಾನದಾಯಕವಾಗುವದೆಂಬ ಭರವಸೆಯಿಂದ ನಾನಿದನ್ನು ಬರೆದಿರುವೆನು.

ಮೊತ್ತಮೊದಲಿನ ರಾಶಿಗಳ ಹಾಗೂ ಗ್ರಹಸ್ವರೂಪಾದಿಗಳ ಗುಣಗಳು ಬಹಳ ಸುಂದರವಾಗಿ ಉಲ್ಲೇಖಿತವಾಗಿವೆ. ಷಡ್ಬಲಗಳು ಹಾಗೂ ಭಾವಗಳು ಮತ್ತು ಭಾವಫಲಗಳು ಅತ್ಯಂತ ಸುಲಭ ಹಾಗೂ ವಿಚಾರಪರಿಪ್ಲುತವಾಗಿವೆ. ಗ್ರಹಗಳ ರಾಶಿ ಹಾಗೂ ಭಾವಗಳ ಫಲ ಮತ್ತು ಮಾಂದಿಫಲವು ಸ್ಪಷ್ಟ ಹಾಗೂ ಜ್ಞಾನಪ್ರದ. ದ್ವಿಗ್ರಹಾದಿ ಯೋಗಗಳು, ನಕ್ಷತ್ರಾದಿ ದಶಾಫಲ, ಹಾಗೂ ಅಂತರ್ದಶಾವಿಧಾನ, ಇವೆಲ್ಲಾ ಬೋಧಪ್ರದವಾಗಿವೆ ಎಂಬುದರಲ್ಲಿ ಓದುಗರಿಗೆ ಸಂದೇಹವಿರದು; ಅನಂತರ ಮಹಾ ಯೋಗಗಳು, ಅವುಗಳ ಫಲಗಳು ಅನುಭವಸಿದ್ಧವಾಗಿವೆ.

ಸತ್ಯಕ್ಕಿಂತ ಮಿಗಿಲಾದ ಧರ್ಮವಿಲ್ಲ, ಸತ್ಯಕ್ಕೆ ಮಿಗಿಲಾದ ಶಾಸ್ತ್ರವಿಲ್ಲ. ಸತ್ಯದಷ್ಟು ನಿಶ್ಚಿತ ಬಲವು ಬೇರೊಂದಿಲ್ಲ; ಸತ್ಯಕ್ಕೆ ಮೀರಿ ಹೋಗುವ ತರ್ಕ ವಿಚಾರವಿಲ್ಲ. ಮಾನವನ ಅಧ್ಯಯನದ ಕುರಿತು ಆಧಾರಸ್ತಂಭ ರೂಪವಾದ ಜ್ಯೋತಿಷ ಶಾಸ್ತ್ರಕ್ಕೆ ಪ್ರಥಮ ಅಡಿಗಲ್ಲು ಈ ಗ್ರಂಥ; ಓದುಗರು ಈ ಗ್ರಂಥದ ಜ್ಞಾನ, ಸೌಂದರ್ಯ ಮತ್ತು ಪ್ರಗಲ್ಭವಿಚಾರಗಳನ್ನು ಮೆಚ್ಚುವರು, ಪ್ರಾಥಮಿಕ ಗ್ರಂಥವಾದರೂ ಇದು ಪರಿಪೂರ್ಣ, ಪರಿಶುದ್ಧ ಮತ್ತು ಸತ್ಯಾನುಭವದಾಯಕ ಗ್ರಂಥ. ಆಕಾಂಕ್ಷೆಗಳ ಧ್ರುವನಕ್ಷತ್ರದಂತೆ ಈ ಗ್ರಂಥವು ಮಾನವನ ಮಾರ್ಗ ವನ್ನು ಬೆಳಗುವಂತಹುದು.

"ಕಾಮಾನ್ ವಿನಯಚ್ಚಂದ್ರೇ ದೈವಂ ಬುದ್ಧಿರ್ವಿನಯೇತ್
ಸೂರ್ಯೇ ದೈವಮ್ ||
ದಿನಕರಬಿಂಬೇ ದೀಪದ್ದೈವಂ ಸಿತಕರಬಿಂಬೇ
ಸಿಂಚತ್‌ದ್ದೈವಮ್"||

ಇಹದಲ್ಲಿ ಕಾಮ ಹಾಗೂ ಸುಖಬಯಸುವವರು ಚಂದ್ರಲೋಕವನ್ನು ಸೇರುತ್ತಾರೆಂಬುದು ವೇದವಾಕ್ಯ. ಆದುದರಿಂದ ಸಕಲ ಕಾಮಗಳ ಪ್ರತಿಬಿಂಬ

ಸ್ವರೂಪವಾದ ಚಂದ್ರನಲ್ಲಿ ಇರುವ ಮಹಾಶಕ್ತಿಯು, ''ಧಿಯೋ ಯೋನಃ ಪ್ರಚೋದಯಾತ್'' ಎಂಬ ವೇದೋಕ್ತಿಗೆ ಅನುಗುಣವಾಗಿ ಸಕಲವಿಧದ ಬುದ್ಧಿಯನ್ನು ವಿಕಾಸಗೊಳಿಸುತ್ತಿರುವ ಸೂರ್ಯನಲ್ಲಿ ಇರುವ ಮಹಾಶಕ್ತಿ; ಸೂರ್ಯಬಿಂಬದಲ್ಲಿ ಪ್ರಜ್ವಲಿಸುವ ಮಹಾಶಕ್ತಿ; ಚಂದ್ರಬಿಂಬದಲ್ಲಿ ಅಮೃತವನ್ನು ವರ್ಷಿಸುವ ಮಹಾಶಕ್ತಿ; ಈ ಎಲ್ಲಾ ಶಕ್ತಿಗಳು ಜ್ಯೋತಿಷ ಶಾಸ್ತ್ರಕ್ಕೆ ಮೂಲ ತತ್ವಗಳು ಎಂಬುದನ್ನು ಹೇಳಲು ನನಗೆ ಸಂತೋಷವಾಗುತ್ತದೆ. ಅಂತಹ ಈ ಚಿಕ್ಕ ಹಾಗೂ ಬಹು ಮೌಲ್ಯದ ಜ್ಯೋತಿಷಬೋಧಿನೀ ಗ್ರಂಥವು ಈ ಶಾಸ್ತ್ರಜ್ಞಾನಪ್ರವೇಶಕ್ಕೆ ಸಹಾಯಕವಾಗಬಲ್ಲುದು. ಇದು ಅತ್ಯುಕ್ತಿಯಲ್ಲ. ಇಂತಹ ಕೃತಿಗಳನ್ನು ಇನ್ನು ಮುಂದಕ್ಕೂ ಬರೆದು ಗ್ರಂಥಕರ್ತನು ಕೃತಕೃತ್ಯನಾಗಲಿ-ಎಂದು ನಾನು ನನ್ನ ಪರಮಶಿಷ್ಯನಾದ ಗ್ರಂಥಕರ್ತನನ್ನು ಆಶೀರ್ವದಿಸುತ್ತೇನೆ.

20–8–1966 — ವೈದ್ಯಗುರು ಎಂ. ಆರ್. ಭಟ್.

ಜಪ್ಪು — ಇತೀ ಶಮ್

॥ ಶ್ರೀ ಗಣೇಶಾಯ ನಮಃ ॥

ಆಧಾರೇ ಪ್ರಥಮಂ ಸಹಸ್ರಕಿರಣಮ್ ತಾರಾಧಿಪಮ್ ಸ್ವಾಲಯೇ ।
ಮಾಹೇಯಮ್ ಮಣಿಪೂರಕೇ ಹೃದಿಬುಧಮ್ ಕಂಠೇಚ ವಾಚಸ್ಪತಿಮ್ ।
ಭ್ರೂಮಧ್ಯೇ ಭೃಗುನಂದನಮ್ ದಿನಮಣೇಃ ಪುತ್ರಮ್ ತ್ರಿಕೂಟಸ್ಥಲೇ ।
ನಾಡೀ ಮಾರ್ಗಸು ರಾಹುಕೇತು ಗುಳಿಕಾನ್ ನಿತ್ಯಂ ನಮಾಮ್ಯಾಯುಷೇ ॥

# ಪೀಠಿಕೆ

— ೦೦ —

ಮೊತ್ತಮೊದಲು ವೇದಗಳು ; ಬಳಿಕ ಷಡಂಗಗಳು ಅನಂತರ ಬ್ರಾಹ್ಮಣ: ಉಪನಿಷತ್; ಪುರಾಣ; ಮುಂತಾದುವುಗಳು; ಉದಯಿಸಿದವು. ಷಡಂಗಗಳ ಪ್ರತ್ಯಕ್ಷ ಹಾಗೂ ಪ್ರಮುಖ ಅಂಗವಾದ ಜ್ಯೋತಿಷಶಾಸ್ತ್ರ ಸ್ವಯಂಸಿದ್ಧ ಶಾಸ್ತ್ರವಾಗಿದೆ. ಇದು ಅನೇಕ ವಿರುದ್ಧಶಕ್ತಿಗಳ ನಡುವೆ ಸಿಲುಕಿ ಬಳಲುವ ಮಾನವನ ಅಧ್ಯಯನವೆಂದರೆ ತಪ್ಪಾಗದು.

ಮಾನವನನ್ನು ಯಥೋಚಿತ ಅರಿತುಕೊಳ್ಳುವುದು ಒಂದು ಸಮಸ್ಯೆ ಯಾಗಿದೆ. ಅನೇಕ ವಿಶ್ವಕೋಶಗಳು ಸಹ ವಿವರಿಸಲಾಗದಷ್ಟು ಕಷ್ಟಸಾಧ್ಯವಾದ ಮಾನವನ ಅಧ್ಯಯನದ ಗಮ್ಯವನ್ನು ಇರಿಸಿದ ಜ್ಯೋತಿಷ ಶಾಸ್ತ್ರವು ಹಾಗೂ ಅದರ ಅಧ್ಯಯನವು ಮಾನವನ ಶಾಂತಿಗೆ, ಸೌಕರ್ಯಕ್ಕೆ ಪ್ರಗತಿಪಥಕ್ಕೆ ಸಹಾಯಕವೆಂಬುದು ನಿಃಸಂದೇಹ. ಈ ಸಣ್ಣ ಗ್ರಂಥವನ್ನು ರಚಿಸಿ ಮಾನವ ಸೇವೆಮಾಡಲು ಉದ್ಯುಕ್ತನಾಗಿರುವುದು, ಹಾಗೂ ಇದನ್ನು ಪ್ರಾರಂಭಿಸುವುದು ನನ್ನ ಕರ್ತವ್ಯವೆಂದು ನಾನು ಭಾವಿಸಿರುತ್ತೇನೆ. ಈ ವಿಶಾಲವಾದ ಮತ್ತು ಗಹನವಾದ ಜ್ಯೋತಿಷ ಶಾಸ್ತ್ರಕ್ಕೆ ನನ್ನ ಈ ಸಣ್ಣ ಜ್ಯೋತಿಷಬೋಧಿನೀಯು ನಮ್ರ ಕಾಣಿಕೆಯಾಗಿದೆ. ಓದುಗರು ಮೆಚ್ಚಿದಾಗ ಮಾತ್ರ ನನ್ನ ಪ್ರಯತ್ನವು ಸಫಲವಾಗುವುದು. ಈ ಗ್ರಂಥದಲ್ಲಿರುವ ನ್ಯೂನಾಧಿಕ್ಯಗಳನ್ನು ಬದಿಗಿರಿಸಿ ಇದರ ತತ್ತ್ವಗಳನ್ನು ತಿಳಿಯಬೇಕೆಂದು ನಾನು ಬಯಸಿ ಓದುಗರನ್ನು ಪ್ರಾರ್ಥಿಸುತ್ತೇನೆ.

ಕೇಳಿದೊಡನೆ ನನ್ನ ಗುರುವರ್ಯರಾದ ವೈದ್ಯಗುರು ಎಂ. ಆರ್. ಭಟ್ರು ಈ ಚಿಕ್ಕ ಪುಟ್ಟ ಗ್ರಂಥಕ್ಕೆ ಮುನ್ನುಡಿ ಬರೆದು ನನ್ನನ್ನು ಆಶೀರ್ವದಿಸಿ ಪ್ರೋತ್ಸಾಹ ನೀಡಿದ್ದಾರೆ. ಅವರಿಗೆ ನಾನು ಕೃತಜ್ಞನಾಗಿದ್ದೇನೆ. ಅವರನ್ನು ಅಭಿವಂದಿಸುತ್ತೇನೆ ಹಾಗೂ ಅಭಿನಂದಿಸುತ್ತೇನೆ. ಹಿಂದಿನ ಆಚಾರ್ಯರನ್ನು ಇಂದೀಗ ನಾನು ನಮಸ್ಕರಿಸುವುದು ನನ್ನ ಕರ್ತವ್ಯ ಮಾತ್ರವಲ್ಲ ನನ್ನ ಇಷ್ಟ ದೇವತೆಗಳಾದ ನವಗ್ರಹಗಳನ್ನು ವಂದಿಸಿ ನನ್ನ ಈ ಪೀಠಿಕೆಯನ್ನು ಕೊನೆ ಗಾಣಿಸುತ್ತೇನೆ.

18–9–1966
ಮಂಗಳೂರು.

ತಮ್ಮೆಲ್ಲರ ಹಿತೇಚ್ಛು
ಬಿ. ಜಿ. ಆಚಾರ್ಯ

## ಅನುಕ್ರಮಣಿಕೆ

|| ಶ್ರೀ ಗಣೇಶಾಯ ನಮಃ ||

ಮೂರ್ತಿತ್ವೇ ಪರಿಕಲ್ಪಿತಃ ಶಶಭೃತೋ ವರ್ತ್ಮಾsಪುನರ್ಜನ್ಮನಾ-
ಮಾತ್ಮೇ ತ್ಯಾತ್ಮವಿದಾಂ ಕ್ರತುಶ್ಚ ಯಜತಾಂ ಭರ್ತಾsಮರ-
ಜ್ಯೋತಿಷಾಮ್ । ಲೋಕಾನಾಂ ಪ್ರಲಯೋದ್ಭವಸ್ಥಿತಿವಿಭುಶ್ಚಾ-
ನೇಕಧಾ ಯಃ ಶ್ರುತೌ ವಾಚಂ ನಃ ಸ ದದಾತು ನೈಕ ಕಿರಣ
ಸ್ತ್ರೈಲೋಕ್ಯದೀಪೋ ರವಿಃ || ವರಾಹಹೋರಾ ||

೧.

| ನವಗ್ರಹರು | | ಪರ್ಯಾಯ ನಾಮ |
|---|---|---|
| 1. | ಸೂರ್ಯ | ರವಿ |
| 2. | ಚಂದ್ರ | ಶಶಿ |
| 3. | ಕುಜ | ಮಂಗಳ |
| 4. | ಬುಧ | ಜ್ಞಃ |
| 5. | ಗುರು | ಬೃಹಸ್ಪತಿ |
| 6. | ಶುಕ್ರ | ಸಿತ |
| 7. | ಶನಿ | ಮಂದ |
| 8. | ರಾಹು | ಸರ್ಪ |
| 9. | ಕೇತು | ಶಿಖಿ |

ಸೌರವ್ಯೂಹದ ಗ್ರಹರಲ್ಲಿ ಸೂರ್ಯನು ಸ್ವಪ್ರಕಾಶಕ ಗ್ರಹನು, ಚಂದ್ರನು ಪ್ರಕಾಶಕ ಗ್ರಹನು. ಕುಜ, ಬುಧ, ಗುರು, ಶುಕ್ರ ಮತ್ತು ಶನಿಯು ತಾರಾ ಗ್ರಹರು. ರಾಹು ಮತ್ತು ಕೇತುಗಳನ್ನು ಛಾಯಾಗ್ರಹರು ಎಂದು ಜ್ಯೋತಿಷ ಶಾಸ್ತ್ರದಲ್ಲಿ ಕರೆಯುತ್ತಾರೆ. ತಾರಾಗ್ರಹರು ಸೂರ್ಯನ ಸುತ್ತಲೂ ನಿರ್ದಿಷ್ಟ ಪಥದಲ್ಲಿ ನಿರಂತರವಾಗಿ ಪರಿಭ್ರಮಿಸುತ್ತ ಇದ್ದಾರೆ. ಚಂದ್ರನು ಭೂಮಿಯ ಸುತ್ತಲೂ ಚಲಿಸುತ್ತಾನೆ. ಛಾಯಾಗ್ರಹರು ತದ್ವಿರುದ್ಧ ದಿಕ್ಕಿನಲ್ಲಿ ಚಲಿಸುತ್ತಾರೆ.

## ೨. ರಾಶಿಚಕ್ರ

| | | | |
|---|---|---|---|
| 12. ಮೀನ 331°-360° | 1. ಮೇಷ 0°-30° | 2. ವೃಷಭ 31°-60° | 3. ಮಿಥುನ 61°-90° |
| 11. ಕುಂಭ 301°-330° | ರಾಶಿಗಳ ಹೆಸರು ಮತ್ತು ಪರಿಮಾಣ | | 4. ಕರ್ಕಟಕ 91°-120° |
| 10. ಮಕರ 271°-300° | | | 5. ಸಿಂಹ 121°-150° |
| 9. ಧನು 141°-270° | 8. ವೃಶ್ಚಿಕ 211°-240° | 7. ತುಲಾ 181°-210° | 6. ಕನ್ಯಾ 151°-180° |

ಕ್ಷಿತಿಜದಲ್ಲಿ ಗ್ರಹರ ಪಥವನ್ನು ತಿಳಿಯಲು ಕಾಲ್ಪನಿಕ ಚಕ್ರವನ್ನು ಗುರುತಿಸಿರುತ್ತಾರೆ. ಇದನ್ನು ಭ ಚಕ್ರ ಅಥವಾ ರಾಶಿಚಕ್ರ ಎಂದು ಕರೆಯುತ್ತಾರೆ. ಇದರ ಪರಿಮಾಣವು 360°ಆಗಿರುತ್ತದೆ. ರಾಶಿಚಕ್ರವನ್ನು ಹನ್ನೆರಡು ವಿಭಾಗಗಳನ್ನಾಗಿ ಮಾಡಿರುತ್ತಾರೆ. 30° ಪರಿಮಾಣದ ಈ ವಿಭಾಗವನ್ನು ರಾಶಿ ಎಂದು ಕರೆಯುತ್ತಾರೆ. ಭೂಮಿಯು ತನ್ನ ಅಕ್ಷದಲ್ಲಿ ದಿನಕ್ಕೆ ಒಂದಾವರ್ತಿ ಪರಿಭ್ರಮಿಸುವಾಗ ಈ ರಾಶಿಚಕ್ರವನ್ನು ಹಾದುಹೋಗುತ್ತದೆ. ಆದ್ದರಿಂದ ಭೂಮಿಯು ಸಾಮಾನ್ಯವಾಗಿ ಎರಡು ಗಂಟೆಗೆ ಒಂದು ರಾಶಿಯನ್ನು ದಾಟುತ್ತದೆ. ಜನನಕಾಲದಲ್ಲಿ ಭೂಮಿಗೆ ಸಮಾನಾಂತರವಾಗಿ ಕ್ಷಿತಿಜದಲ್ಲಿ ಉದಯ ಆಗುವ ರಾಶಿಯನ್ನು ಜನ್ಮಲಗ್ನ ಎಂದು ಕರೆಯುತ್ತಾರೆ

ಕ್ಷಿತಿಜದಲ್ಲಿ ಸೂರ್ಯನ ಪಥವು ರಾಶಿಚಕ್ರದ ಮಧ್ಯದಿಂದ ಹಾದು ಹೋಗುತ್ತದೆ. ಇದನ್ನು ಕ್ರಾಂತಿವೃತ್ತ ಎಂದು ಕರೆಯುತ್ತಾರೆ. ಸೂರ್ಯನ ಪಥದ ಉಭಯ ಪಾರ್ಶ್ವಗಳಲ್ಲಿ ಸಾಧಾರಣ 9° ರಾಶಿಚಕ್ರದ ಅಗಲ ಪರಿಮಾಣ ಇರುತ್ತದೆ. ಸೂರ್ಯನ ರಾಶಿಪ್ರವೇಶ ಕಾಲವನ್ನು ಸಂಕ್ರಾಂತಿ ಎಂದು ಕರೆಯುತ್ತಾರೆ. ಸೂರ್ಯನ ಮಕರರಾಶಿ ಪ್ರವೇಶಕಾಲವು ಮಕರ ಸಂಕ್ರಾಂತಿ ಹಾಗೂ ಉತ್ತರಾಯಣ ಪ್ರಾರಂಭಕಾಲ ಆಗಿರುತ್ತದೆ. ಸೂರ್ಯನ ಕರ್ಕಟಕರಾಶಿ ಪ್ರವೇಶಕಾಲವು ಕರ್ಕಟಕ ಸಂಕ್ರಾಂತಿ ಮತ್ತು ದಕ್ಷಿಣಾಯಣ ಪ್ರಾರಂಭಕಾಲ ಆಗಿರುತ್ತದೆ.

# ೩. ನಕ್ಷತ್ರಗಳು

## ರಾಶಿಚಕ್ರದಲ್ಲಿ ಇರುವ 27 ನಕ್ಷತ್ರಗಳು

| | | | | | |
|---|---|---|---|---|---|
| 1. | ಅಶ್ವಿನಿ | 10. | ಮಘಾ | 19. | ಮೂಲಾ |
| 2. | ಭರಣಿ | 11. | ಹುಬ್ಬಾ | 20. | ಪೂರ್ವಾಷಾಢಾ |
| 3. | ಕೃತ್ತಿಕಾ | 12. | ಉತ್ತರಾ | 21. | ಉತ್ತರಾಷಾಢಾ |
| 4. | ರೋಹಿಣಿ | 13. | ಹಸ್ತಾ | 22 | ಶ್ರವಣಾ |
| 5. | ಮೃಗಶಿರಾ | 14. | ಚಿತ್ರಾ | 23. | ಧನಿಷ್ಠಾ |
| 6. | ಆರ್ದ್ರಾ | 15. | ಸ್ವಾತಿ | 24. | ಶತಭಿಷಾ |
| 7. | ಪುನರ್ವಸು | 16. | ವಿಶಾಖಾ | 25. | ಪೂರ್ವಾಭಾದ್ರಾ |
| 8. | ಪುಷ್ಯಾ | 17. | ಅನುರಾಧಾ | 26. | ಉತ್ತರಾಭಾದ್ರಾ |
| 9. | ಆಶ್ಲೇಷಾ | 18. | ಜ್ಯೇಷ್ಠಾ | 27. | ರೇವತಿ |

ಪ್ರತಿ ಒಂದು ನಕ್ಷತ್ರವನ್ನು ನಾಲ್ಕು ಭಾಗಗಳನ್ನಾಗಿ ಮಾಡಿರುತ್ತಾರೆ. ಪ್ರತಿ ಒಂದು ಭಾಗವನ್ನು ಚರಣ ಅಥವಾ ಪಾದ ಎಂದು ಕರೆಯುತ್ತಾರೆ.

| ರೇವತಿ 4<br>ಉತ್ತರಾಭಾದ್ರಾ 4<br>ಪೂರ್ವಾಭಾದ್ರಾ 1 | ಅಶ್ವಿನಿ 4<br>ಭರಣಿ 4<br>ಕೃತ್ತಿಕಾ 1 | ಕೃತ್ತಿಕಾ 3<br>ರೋಹಿಣಿ 4<br>ಮೃಗಶಿರಾ 2 | ಮೃಗಶಿರಾ 2<br>ಆರ್ದ್ರಾ 4<br>ಪುನರ್ವಸು 3 |
|---|---|---|---|
| ಪೂರ್ವಾಭಾದ್ರಾ 3<br>ಶತಭಿಷಾ 4<br>ಧನಿಷ್ಠಾ 2 | ರಾಶಿ ಮತ್ತು ನಕ್ಷತ್ರ | | ಪುನರ್ವಸು 1<br>ಪುಷ್ಯಾ 4<br>ಆಶ್ಲೇಷಾ 4 |
| ಧನಿಷ್ಠಾ 2<br>ಶ್ರವಣಾ 4<br>ಉತ್ತರಾಷಾಢಾ 3 | | | ಮಘಾ 4<br>ಹುಬ್ಬಾ 4<br>ಉತ್ತರಾ 1 |
| ಉತ್ತರಾಷಾಢಾ 1<br>ಪೂರ್ವಾಷಾಢಾ 4<br>ಮೂಲಾ 4 | ವಿಶಾಖಾ 1<br>ಅನುರಾಧಾ 4<br>ಜ್ಯೇಷ್ಠಾ 4 | ಚಿತ್ರಾ 2<br>ಸ್ವಾತಿ 4<br>ವಿಶಾಖಾ 3 | ಉತ್ತರಾ 3<br>ಹಸ್ತಾ 4<br>ಚಿತ್ರಾ 2 |

ಒಂದು ನಕ್ಷತ್ರದ ಪರಿಮಾಣವು 13° 20′ ಆಗಿರುತ್ತದೆ. ಒಂದು ಚರಣದ ಪರಿಮಾಣವು 3° 20′ ಆಗಿರುತ್ತದೆ. ರಾಶಿಚಕ್ರದ 27 ನಕ್ಷತ್ರಗಳ ಒಟ್ಟು ಪರಿಮಾಣವು 360° ಆಗಿರುತ್ತದೆ. ಪ್ರತಿ ಒಂದು ರಾಶಿಯಲ್ಲಿ $2\frac{1}{4}$ ನಕ್ಷತ್ರ ಅಂದರೆ 9 ನಕ್ಷತ್ರ ಚರಣಗಳು ಇರುತ್ತವೆ. ಆದ್ದರಿಂದ ರಾಶಿಚಕ್ರದಲ್ಲಿ ೧೦೮ ನಕ್ಷತ್ರ ಚರಣಗಳು ಅಂದರೆ 27 ನಕ್ಷತ್ರಗಳು ಇರುತ್ತವೆ.

ಮೇಷರಾಶಿ ಮತ್ತು ಅಶ್ವಿನಿ ನಕ್ಷತ್ರವು ರಾಶಿಚಕ್ರದ ಪ್ರಾರಂಭ ಬಿಂದು ಆಗಿರುತ್ತದೆ. ಮೀನರಾಶಿ ಮತ್ತು ರೇವತಿ ನಕ್ಷತ್ರದ ಅಂತ್ಯವು ರಾಶಿಚಕ್ರದ ಅಂತಿಮ ಬಿಂದು ಆಗಿರುತ್ತದೆ.

**ತ್ರಿಪಾದ ನಕ್ಷತ್ರಗಳು:** ಕೃತ್ತಿಕಾ, ಉತ್ತರಾ ಮತ್ತು ಉತ್ತರಾಷಾಢಾ ಈ ಮೂರು ನಕ್ಷತ್ರಗಳ ಪ್ರಥಮ ಪಾದವು ಕ್ರಮವಾಗಿ ಮೇಷ, ಸಿಂಹ ಮತ್ತು ಧನು ರಾಶಿಯಲ್ಲಿ ಇರುತ್ತದೆ. ಉಳಿದ ಮೂರು ಪಾದಗಳು ಕ್ರಮವಾಗಿ ವೃಷಭ, ಕನ್ಯಾ ಮತ್ತು ಮಕರ ರಾಶಿಯಲ್ಲಿ ಇರುತ್ತದೆ. ಹಾಗೆಯೇ ಪುನರ್ವಸು, ವಿಶಾಖಾ ಮತ್ತು ಪೂರ್ವಾಭಾದ್ರಾ ಈ ಮೂರು ನಕ್ಷತ್ರಗಳ ಪ್ರಥಮ, ದ್ವಿತೀಯ ಮತ್ತು ತೃತೀಯ ಪಾದಗಳು ಕ್ರಮವಾಗಿ ಮಿಥುನ, ತುಲಾ ಮತ್ತು ಕುಂಭರಾಶಿಯಲ್ಲಿ ಇರುತ್ತದೆ. ಹಾಗೆಯೇ ಉಳಿದ ಚತುರ್ಥಪಾದವು ಕ್ರಮವಾಗಿ ಕರ್ಕಟಕ, ವೃಶ್ಚಿಕ ಮತ್ತು ಮೀನರಾಶಿಯಲ್ಲಿ ಇರುತ್ತದೆ. ಆದ್ದರಿಂದ ಈ ಆರು ನಕ್ಷತ್ರಗಳನ್ನು ತ್ರಿಪಾದ ನಕ್ಷತ್ರಗಳು ಎಂದು ಕರೆಯುತ್ತಾರೆ.

**ಅರ್ಧ ನಕ್ಷತ್ರಗಳು:** ಮೃಗಶಿರಾ, ಚಿತ್ರಾ ಮತ್ತು ಧನಿಷ್ಠಾ ಈ ಮೂರು ನಕ್ಷತ್ರಗಳ ಪ್ರಥಮ ಮತ್ತು ದ್ವಿತೀಯ ಪಾದಗಳು ಕ್ರಮವಾಗಿ ವೃಷಭ, ಕನ್ಯಾ ಮತ್ತು ಮಕರರಾಶಿಯಲ್ಲಿ ಇರುತ್ತದೆ. ಉಳಿದ ತೃತೀಯ ಮತ್ತು ಚತುರ್ಥಪಾದಗಳು ಕ್ರಮವಾಗಿ ಮಿಥುನ, ತುಲಾ ಮತ್ತು ಕುಂಭರಾಶಿಗಳಲ್ಲಿ ಇರುತ್ತದೆ. ಈ ಮೂರು ನಕ್ಷತ್ರಗಳನ್ನು ಅರ್ಧ ನಕ್ಷತ್ರಗಳು ಎಂದು ಕರೆಯುತ್ತಾರೆ.

**ರಾಶಿಸಂಧಿ : 1.** ಕರ್ಕಟಕರಾಶಿಯ ಅಂತ್ಯವು ಸಿಂಹ ರಾಶಿಯ ಪ್ರಾರಂಭದೊಡನೆ ನಕ್ಷತ್ರದಿಂದ ಕೂಡಲ್ಪಡುವುದಿಲ್ಲ ಆದ್ದರಿಂದ ಇದನ್ನು ಋಕ್ಷ

ಸಂಧಿ ಎಂದು ಕರೆಯುತ್ತಾರೆ. ಇದು ರಾಶಿಚಕ್ರದ ಪ್ರಥಮ ಋಕ್ಷಸಂಧಿ ಆಗಿರುತ್ತದೆ. 2. ವೃಶ್ಚಿಕರಾಶಿಯ ಅಂತ್ಯವು ಧನುರಾಶಿಯ ಪ್ರಾರಂಭದೊಡನೆ ನಕ್ಷತ್ರದಿಂದ ಕೂಡಲ್ಪಡುವುದಿಲ್ಲ, ಇದು ರಾಶಿಚಕ್ರದ ದ್ವಿತೀಯ ಋಕ್ಷಸಂಧಿ ಆಗಿರುತ್ತದೆ. 3. ಮೀನರಾಶಿಯ ಅಂತ್ಯವು ಮೇಷರಾಶಿಯ ಪ್ರಾರಂಭದೊಡನೆ ನಕ್ಷತ್ರದಿಂದ ಕೂಡಲ್ಪಡುವುದಿಲ್ಲ ಇದು ರಾಶಿಚಕ್ರದ ತೃತೀಯ ಋಕ್ಷಸಂಧಿ ಆಗಿರುತ್ತದೆ. ರಾಶಿಚಕ್ರದಲ್ಲಿ ಒಟ್ಟು ಮೂರು ಋಕ್ಷಸಂಧಿಗಳು ಇವೆ. ಇವು ಅಶುಭಫಲಗಳನ್ನು ನೀಡುತ್ತವೆ.

## ೪. ರಾಶಿಯ ಗುಣಧರ್ಮಗಳು

ರಾಶಿಸ್ವರೂಪ : 1. ಮೇಷರಾಶಿಯ ಸ್ವರೂಪವು ಟಗರಿನಂತೆ ಇರುತ್ತದೆ. 2. ವೃಷಭರಾಶಿಯ ಸ್ವರೂಪವು ಎತ್ತಿನಂತೆ ಇರುತ್ತದೆ. 3. ಮಿಥುನರಾಶಿಯ ಸ್ವರೂಪವು ಗದೆಯನ್ನು ಕೈಯಲ್ಲಿ ಹಿಡಿದ ಮನುಷ್ಯ ಮತ್ತು ವೀಣೆಯನ್ನು ಕೈಯಲ್ಲಿ ಹಿಡಿದ ಸ್ತ್ರೀಯಂತೆ ಇರುತ್ತದೆ. 4. ಕರ್ಕಟಕ ರಾಶಿಯ ಸ್ವರೂಪವು ಏಡಿಯಂತೆ ಇರುತ್ತದೆ. 5. ಸಿಂಹರಾಶಿಯು ಸಿಂಹ ದಂತೆ ಇರುತ್ತದೆ. 6. ಕನ್ಯಾರಾಶಿಯ ಸ್ವರೂಪವು ಒಂದು ಕೈಯಲ್ಲಿ ಬೆಂಕಿ ಯನ್ನು, ಒಂದು ಕೈಯಲ್ಲಿ ಸಸ್ಯವನ್ನು ಹಿಡಿದು ದೋಣಿಯಲ್ಲಿ ಕುಳಿತ ಕನ್ಯೆಯಂತೆ ಇರುತ್ತದೆ 7. ತುಲಾರಾಶಿಯ ಸ್ವರೂಪವು ಕೈಯಲ್ಲಿ ತ್ರಾಸನ್ನು ಹಿಡಿದ ಮನುಷ್ಯನಂತೆ ಇರುತ್ತದೆ. 8. ವೃಶ್ಚಿಕರಾಶಿಯ ಸ್ವರೂಪವು ಚೇಳಿನಂತೆ ಇರುತ್ತದೆ. 9. ಧನುರಾಶಿಯ ಸ್ವರೂಪವು ಬಿಲ್ಲುಬಾಣವನ್ನು ಕೈಯಲ್ಲಿ ಹಿಡಿದ, ಅಶ್ವದಂತೆ ದೇಹವುಳ್ಳ ಮನುಷ್ಯ ಆಕೃತಿ ಆಗಿರುತ್ತದೆ. 10. ಮಕರ ರಾಶಿಯು ಜಿಂಕೆಯ ಮುಖ ಇರುವ ಮತ್ತು ಮೊಸಳೆಯ ದೇಹದಿಂದ ಕೂಡಿರುವ ಸ್ವರೂಪ ಉಳ್ಳದ್ದು ಆಗಿರುತ್ತದೆ. 11. ಕುಂಭರಾಶಿಯ ಸ್ವರೂಪವು ಭುಜದಲ್ಲಿ ರಿಕ್ತಕೊಡವನ್ನು ಹಿಡಿದ ಮನಷ್ಯನಂತೆ ಇರುತ್ತದೆ. 12. ಮೀನರಾಶಿಯ ಸ್ವರೂಪವು ಎರಡು ಮೀನುಗಳು, ಒಂದರ ಬಾಯಲ್ಲಿ ಇನ್ನೊಂದರ ಬಾಲವು ಇರುವಂತೆ ಸ್ವರೂಪ ಉಳ್ಳದ್ದು ಆಗಿರುತ್ತದೆ.

ಕ್ಷಿತಿಜದಲ್ಲಿ ರಾಶಿಚಕ್ರವನ್ನು ವೀಕ್ಷಿಸುವಾಗ ಮೇಲಿನಂತೆ ರಾಶಿಗಳ ಸ್ವರೂಪ ಕಂಡುಬರುತ್ತದೆ, ರಾಶಿಗಳ ಸ್ವಭಾವ, ಗುಣಧರ್ಮಗಳನ್ನು ವಿವರಿಸಿ ಮುಂದೆ ಬರೆದಿರುತ್ತದೆ.

2. ಚತುಷ್ಪದರಾಶಿಗಳು: ಮೇಷ, ವೃಷಭ, ಸಿಂಹ, ಧನುರಾಶಿಯ ಉತ್ತರಾರ್ಧ ಮತ್ತು ಮಕರರಾಶಿಯ ಪೂರ್ವಾರ್ಧ, ಇವುಗಳು ಚತುಷ್ಪದ ರಾಶಿಗಳು ಆಗಿರುತ್ತವೆ. ಚತುಷ್ಪದರಾಶಿಗಳು ದಶಮಭಾವದಲ್ಲಿ ಬಲಿಷ್ಠ ಆಗಿರುತ್ತವೆ.

3. ದ್ವಿಪದರಾಶಿಗಳು: (ನರರಾಶಿಗಳು) ಮಿಥುನ, ಕನ್ಯಾ, ತುಲಾ, ಧನುರಾಶಿಯ ಪೂರ್ವಾರ್ಧ ಮತ್ತು ಕುಂಭರಾಶಿ, ಈ ರಾಶಿಗಳನ್ನು ದ್ವಿಪದ ಅಥವಾ ನರರಾಶಿ ಎಂದು ಕರೆಯುತ್ತಾರೆ. ನರರಾಶಿಗಳು ಲಗ್ನಭಾವದಲ್ಲಿ ಬಲಿಷ್ಠ ಆಗಿರುತ್ತವೆ

4. ಜಲರಾಶಿಗಳು: ಕರ್ಕಟಕ, ಮಕರರಾಶಿಯ ಉತ್ತರಾರ್ಧ ಮತ್ತು ಮೀನರಾಶಿ, ಈ ರಾಶಿಗಳನ್ನು ಜಲರಾಶಿ ಎಂದು ಕರೆಯುತ್ತಾರೆ. ಜಲರಾಶಿಗಳು ಚತುರ್ಥಭಾವದಲ್ಲಿ ಬಲಿಷ್ಠ ಆಗಿರುತ್ತವೆ. ಕುಂಭರಾಶಿಯನ್ನು ಕೂಡಾ ಜಲರಾಶಿ ಎಂದು ಕರೆಯುತ್ತಾರೆ.

5. ಕೀಟರಾಶಿ: ವೃಶ್ಚಿಕರಾಶಿಯನ್ನು ಕೀಟರಾಶಿ ಎಂದು ಕರೆಯುತ್ತಾರೆ. ಕೀಟರಾಶಿಯು ಸಪ್ತಮದಲ್ಲಿ ಬಲಿಷ್ಠ ಆಗಿರುತ್ತದೆ. ಕೆಲವರು ಕರ್ಕಟಕ ರಾಶಿಯನ್ನು ಕೀಟರಾಶಿ ಎಂದು ಮತ್ತು ವೃಶ್ಚಿಕವನ್ನು ಸರಿಸೃಪ ಎಂದು ಕರೆಯುತ್ತಾರೆ.

6. ಬಹುಪದರಾಶಿಗಳು: ಕರ್ಕಟಕ ಮತ್ತು ವೃಶ್ಚಿಕವನ್ನು ಬಹುಪದ ರಾಶಿಗಳು ಎಂದು ಕರೆಯುತ್ತಾರೆ.

7. ರಾತ್ರಿಬಲರಾಶಿಗಳು: ಮೇಷ, ವೃಷಭ, ಮಿಥುನ, ಕರ್ಕಟಕ, ಧನು ಮತ್ತು ಮಕರರಾಶಿ, ಈ ಆರು ರಾಶಿಗಳು ರಾತ್ರಿಕಾಲದಲ್ಲಿ ಬಲಿಷ್ಠ ಆಗಿರುವುದರಿಂದ ಇವುಗಳನ್ನು ನಿಶಾಬಲರಾಶಿಗಳು ಎಂದು ಕರೆಯುತ್ತಾರೆ.

8. ದಿವಾಬಲರಾಶಿಗಳು: ಸಿಂಹ, ಕನ್ಯಾ, ತುಲಾ, ವೃಶ್ಚಿಕ, ಕುಂಭ ಮತ್ತು ಮೀನರಾಶಿ, ಈ ಆರುರಾಶಿಗಳು ಹಗಲಿನಲ್ಲಿ ಬಲಿಷ್ಠ ಆಗಿರುವುದರಿಂದ ಇವುಗಳನ್ನು ದಿವಾಬಲರಾಶಿಗಳು ಎಂದು ಕರೆಯುತ್ತಾರೆ.

9. ಪ್ರಷ್ಠೋದಯ ರಾಶಿಗಳು: ಮೇಷ, ವೃಷಭ, ಕರ್ಕಟಕ, ಧನು, ಮತ್ತು ಮಕರರಾಶಿ ಈ ಐದು ರಾಶಿಗಳು ಪ್ರಷ್ಠೋದಯ ರಾಶಿಗಳು ಆಗಿರುತ್ತವೆ. ಪ್ರಷ್ಠೋದಯ ರಾಶಿಗಳಲ್ಲಿ ಸ್ಥಿತಗ್ರಹರು ತಮ್ಮ ದಶಾಕಾಲದ ಅಂತ್ಯತ್ರಿಭಾಗದಲ್ಲಿ ಶುಭಫಲಗಳನ್ನು ನೀಡುತ್ತಾರೆ.

10. ಶಿರ್ಷೋದಯ ರಾಶಿಗಳು: ಸಿಂಹ, ಕನ್ಯಾ, ತುಲಾ, ವೃಶ್ಚಿಕ, ಕುಂಭ ಮತ್ತು ಮಿಥುನರಾಶಿ, ಈ ಆರು ರಾಶಿಗಳು ಶೀರ್ಷೋದಯ ರಾಶಿಗಳು ಆಗಿರುತ್ತವೆ. ಶೀರ್ಷೋದಯ ರಾಶಿಸ್ಥಿತ ಗ್ರಹರು ತಮ್ಮ ದಶಾಕಾಲದ ಆದಿತ್ರಿಭಾಗದಲ್ಲಿ ಶುಭಫಲಗಳನ್ನು ನೀಡುತ್ತಾರೆ.

11. ಉಭಯೋದಯರಾಶಿ: ಮೀನರಾಶಿಯನ್ನು ಉಭಯೋದಯರಾಶಿ ಎಂದು ಕರೆಯುತ್ತಾರೆ. ಉಭಯೋದಯ ರಾಶಿಸ್ಥಿತ ಗ್ರಹರು ತಮ್ಮ ದಶಾಕಾಲದ ಮಧ್ಯತ್ರಿಭಾಗದಲ್ಲಿ ಶುಭಫಲಗಳನ್ನು ನೀಡುತ್ತಾರೆ.

12. ಚರರಾಶಿಗಳು: ಮೇಷ, ಕರ್ಕಟಕ, ತುಲಾ ಮತ್ತು ಮಕರರಾಶಿ ಈ ನಾಲ್ಕು ರಾಶಿಗಳು, ಚರಸ್ವಭಾವದ ರಾಶಿಗಳು ಆಗಿರುತ್ತವೆ.

13. ಸ್ಥಿರರಾಶಿಗಳು: ವೃಷಭ, ಸಿಂಹ, ವೃಶ್ಚಿಕ ಮತ್ತು ಕುಂಭರಾಶಿ ಈ ನಾಲ್ಕು ರಾಶಿಗಳು ಸ್ಥಿರಸ್ವಭಾವದ ರಾಶಿಗಳು ಆಗಿರುತ್ತವೆ.

14. ಉಭಯರಾಶಿಗಳು: (ದ್ವಿಸ್ವಭಾವರಾಶಿ) ಮಿಥುನ, ಕನ್ಯಾ, ಧನು ಮತ್ತು ಮೀನರಾಶಿ ಈ ನಾಲ್ಕು ರಾಶಿಗಳು, ಚರ ಮತ್ತು ಸ್ಥಿರರಾಶಿಗಳ ಮಿಶ್ರರೂಪವಾದ ಉಭಯರಾಶಿಗಳು ಆಗಿರುತ್ತವೆ.

15. ಅಗ್ನಿತತ್ವರಾಶಿಗಳು: ಮೇಷ, ಸಿಂಹ ಮತ್ತು ಧನುರಾಶಿ, ಈ ಮೂರು ರಾಶಿಗಳನ್ನು ಅಗ್ನಿತತ್ವರಾಶಿಗಳು ಎಂದು ಕರೆಯುತ್ತಾರೆ. ಈ ರಾಶಿಗಳು ಪೂರ್ವದಿಕ್ಕಿನ ಅಧಿಪತಿಗಳು ಆಗಿರುತ್ತವೆ.

16. ಭೂತತ್ವರಾಶಿಗಳು: ವೃಷಭ, ಕನ್ಯಾ ಮತ್ತು ಮಕರರಾಶಿ, ಈ ಮೂರು ರಾಶಿಗಳನ್ನು ಭೂತತ್ವರಾಶಿಗಳು ಎಂದು ಕರೆಯುತ್ತಾರೆ, ಈ ರಾಶಿಗಳು ದಕ್ಷಿಣ ದಿಕ್ಕಿನ ಅಧಿಪತಿಗಳು ಆಗಿರುತ್ತವೆ.

17. ವಾಯುತತ್ವ ರಾಶಿಗಳು: ಮಿಥುನ, ತುಲಾ ಮತ್ತು ಕುಂಭ ರಾಶಿ, ಈ ಮೂರು ರಾಶಿಗಳನ್ನು ವಾಯುತತ್ವರಾಶಿಗಳು ಎಂದು ಕರೆಯುತ್ತಾರೆ. ಈ ರಾಶಿಗಳು ಪಶ್ಚಿಮ ದಿಕ್ಕಿನ ಅಧಿಪತಿಗಳು ಆಗಿರುತ್ತವೆ.

13. ಜಲತತ್ವರಾಶಿಗಳು: ಕರ್ಕಟಕ, ವೃಶ್ಚಿಕ ಮತ್ತು ಮೀನರಾಶಿ ಈ ಮೂರು ರಾಶಿಗಳನ್ನು ಜಲರಾಶಿಗಳು ಎಂದು ಕರೆಯುತ್ತಾರೆ. ಈ ರಾಶಿಗಳು ಉತ್ತರ ದಿಕ್ಕಿನ ಅಧಿಪತಿಗಳು ಆಗಿರುತ್ತವೆ.

19. ಪುರುಷ ಮತ್ತು ಓಜ, (ಬೆಸ) ರಾಶಿಗಳು: ಮೇಷ, ಮಿಥುನ, ಸಿಂಹ, ತುಲಾ, ಧನು ಮತ್ತು ಕುಂಭರಾಶಿ, ಈ ಆರು ರಾಶಿಗಳು ಪುರುಷಸ್ವಭಾವದ ರಾಶಿಗಳು ಮತ್ತು ಓಜ (ವಿಷಮ) ರಾಶಿಗಳು ಆಗಿರುತ್ತವೆ. ಜನನಕಾಲದಲ್ಲಿ ಬಲಿಷ್ಠನಾದ ಗ್ರಹನು ಪುರುಷರಾಶಿಯಲ್ಲಿ ಇದ್ದರೆ ಜಾತಕನು ಧೀರನು, ಯೋಧನು ಆಗುತ್ತಾನೆ. ಗ್ರಹನು ಬಲಹೀನನಾಗಿ ಪುರುಷರಾಶಿಯಲ್ಲಿ ಇದ್ದರೆ ಕಠೋರಸ್ವಭಾವದವನು, ಕ್ರೂರನು ಮತ್ತು ಮೂರ್ಖನು ಆಗುತ್ತಾನೆ.

20. ಸ್ತ್ರೀ, ಸಮ, ಸರಿ, ಯುಗ್ಮ ರಾಶಿಗಳು: ವೃಷಭ, ಕರ್ಕಟಕ, ಕನ್ಯಾ, ವೃಶ್ಚಿಕ, ಮಕರ ಮತ್ತು ಮೀನರಾಶಿ, ಈ ಆರು ರಾಶಿಗಳು ಸ್ತ್ರೀ ಸ್ವಭಾವದ ರಾಶಿಗಳು ಮತ್ತು ಯುಗ್ಮ ರಾಶಿಗಳು ಆಗಿರುತ್ತವೆ. ಜನನಕಾಲದಲ್ಲಿ ಹೆಚ್ಚು ಗ್ರಹರು ಸ್ತ್ರೀರಾಶಿಯಲ್ಲಿ ಇದ್ದರೆ ಜಾತಕನು ಮೃದುಸ್ವಭಾವ, ಯುದ್ಧ ಭಯ, ನೀರು, ಪುಷ್ಪ ಮತ್ತು ವಸ್ತ್ರದಲ್ಲಿ ಆಸಕ್ತಿ, ಸದ್ಗುಣ, ನಿರೋಗಿಯು, ಸ್ವಜನ ಪೋಷಕನು ಆಗುತ್ತಾನೆ.

21. ಕ್ರೂರ ಸ್ವಭಾವದ ರಾಶಿಗಳು: ಆರು ಪುರುಷ ರಾಶಿಗಳು ಕ್ರೂರ ಸ್ವಭಾವದ ರಾಶಿಗಳು ಆಗಿರುತ್ತವೆ. ಇವುಗಳಲ್ಲಿ ಮೇಷ, ಸಿಂಹ ಮತ್ತು ಕುಂಭರಾಶಿ, ಈ ಮೂರು ರಾಶಿಗಳು ನೈಸರ್ಗಿಕವಾಗಿ ಕ್ರೂರಸ್ವಭಾವದ ರಾಶಿಗಳು ಆಗಿರುತ್ತವೆ. ಮಿಥುನ, ತುಲಾ ಮತ್ತು ಧನುರಾಶಿ ಈ ಮೂರು ರಾಶಿಗಳು ಕ್ರೂರರಾಶಿಗಳಲ್ಲಿ ಸೌಮ್ಯ ಸ್ವಭಾವದ ರಾಶಿಗಳು ಆಗಿರುತ್ತವೆ.

22. ಸೌಮ್ಯ ಸ್ವಭಾವದ ರಾಶಿಗಳು: ಆರು ಸ್ತ್ರೀ ರಾಶಿಗಳು ಸೌಮ್ಯ ಸ್ವಭಾವದ ರಾಶಿಗಳು ಆಗಿರುತ್ತವೆ. ಇವುಗಳಲ್ಲಿ ವೃಷಭ, ಕನ್ಯಾ ಮತ್ತು ಮೀನರಾಶಿ ಈ ಮೂರು ರಾಶಿಗಳು ನೈಸರ್ಗಿಕವಾಗಿ ಸೌಮ್ಯ ಸ್ವಭಾವದ

ರಾಶಿಗಳು ಆಗಿರುತ್ತವೆ. ಕರ್ಕಟಕ, ವೃಶ್ಚಿಕ ಮತ್ತು ಮಕರ ರಾಶಿ ಈ ಮೂರು ರಾಶಿಗಳು ಸೌಮ್ಯರಾಶಿಗಳಲ್ಲಿ ಕ್ರೂರ ಸ್ವಭಾವದ ರಾಶಿಗಳು ಆಗಿರುತ್ತವೆ.

ವಿಷಮ ರಾಶಿಗಳಲ್ಲಿ ಜನಿಸಿದವರು ರಾಶಿಸ್ವಭಾವಕ್ಕೆ ಅನುಗುಣವಾಗಿ ಕ್ರೂರಸ್ವಭಾವದರು ಮತ್ತು ಸಮರಾಶಿಗಳಲ್ಲಿ ಜನಿಸಿದವರು ಸೌಮ್ಯ ಸ್ವಭಾವ ದವರು ಆಗುತ್ತಾರೆ.

**23. ಪರ್ವತಚಾರಿ ರಾಶಿಗಳು:** ಮೇಷರಾಶಿಯು ಗುಡ್ಡ, ಪರ್ವತ ಮೊದಲಾದ ಎತ್ತರ ಸ್ಥಳ ಮತ್ತು ಧಾತು· ರತ್ನಗಳಿರುವ, ಸ್ಥಳ ಸಂಚಾರವನ್ನು ಸೂಚಿಸುತ್ತದೆ. ಸಿಂಹರಾಶಿಯು ಅರಣ್ಯ, ಗುಹೆ, ಗುಡ್ಡ ಮೊದಲಾದ ಸ್ಥಳ ಸಂಚಾರವನ್ನು ಸೂಚಿಸುತ್ತದೆ. ಧನುರಾಶಿಯು ಕೋಟೆ, ದುರ್ಗ, ರಣರಂಗ, ಮೊದಲಾದ ಸ್ಥಳಸಂಚಾರವನ್ನು ಸೂಚಿಸುತ್ತದೆ. ಈ ಮೂರು ರಾಶಿಗಳನ್ನು ಪರ್ವತಚಾರಿ ರಾಶಿಗಳು ಎಂದು ಕರೆಯುತ್ತಾರೆ.

**24. ಭೂಮಿಂಚಾರಿ ರಾಶಿಗಳು:** ವೃಷಭರಾಶಿಯು ಹೊಲ-ಗದ್ದೆ, ಹಟ್ಟಿ, ಬಯಲುಪ್ರದೇಶ ಮೊದಲಾದ ಸ್ಥಳ ಸಂಚಾರವನ್ನು ಸೂಚಿಸುತ್ತದೆ. ಮಕರರಾಶಿಯು ಗುಡ್ಡದ ಕೆಳಭಾಗದಲ್ಲಿರುವ ತಪ್ಪಲು ಪ್ರದೇಶ, ಜವುಗುಸ್ಥಳ, ಮೊದಲಾದ ಸ್ಥಳಸಂಚಾರವನ್ನು ಸೂಚಿಸುತ್ತದೆ. ಈ ಮೂರು ರಾಶಿಗಳನ್ನು ಭೂಮಿಂಚಾರಿ ರಾಶಿಗಳು ಎಂದು ಕರೆಯುತ್ತಾರೆ.

* ಕನ್ಯಾರಾಶಿಯು ತೋಟ ಕಲಾಪ್ರದೇಶ, ಕೆರೆ ಇತ್ಯಾದಿ ಸಂಚಾರ ಸೂಚಿಸುತ್ತದೆ.

**25. ವನಚರ ರಾಶಿಗಳು:** ಮಿಥುನರಾಶಿಯು ವಿಹಾರಸ್ಥಳ, ಆಟದ ಬಯಲು, ಕ್ರೀಡಾಸ್ಥಾನ, ಉದ್ಯಾನ ಮತ್ತು ತುಲಾರಾಶಿಯು ಪಟ್ಟಣ, ವ್ಯಾಪಾರಸ್ಥಳ, ಮತ್ತು ಕುಂಭರಾಶಿಯು ಮನುಷ್ಯ ಸಂಚಾರ ಇರುವಸ್ಥಳ, ಉದ್ಯಾನ, ತೋಟ ಮೊದಲಾದ ಸ್ಥಳಸಂಚಾರವನ್ನು ಸೂಚಿಸುತ್ತದೆ. ಈ ಮೂರು ರಾಶಿಗಳನ್ನು ವನಚರರಾಶಿಗಳು ಎಂದು ಕರೆಯುತ್ತಾರೆ.

**26. ಜಲಚರರಾಶಿಗಳು:** ಕರ್ಕಟಕ ರಾಶಿಯು ನೀರಿನ ಹತ್ತಿರ, ನದಿಯದಡ, ಮೊದಲಾದ ಸ್ಥಳಗಳನ್ನು ಸೂಚಿಸುತ್ತದೆ. ವೃಶ್ಚಿಕರಾಶಿಯು ಬಿಲ, ಗುಹೆ, ಗುಪ್ತಸ್ಥಳ, ವಿಷಜಂತುಗಳಿರುವ ಸ್ಥಳ, ದ್ವೀಪ, ಅಗಲಕಿರಿದಾದ

ಪ್ರದೇಶ ಮೊದಲಾದ ಸ್ಥಳಗಳನ್ನು ಸೂಚಿಸುತ್ತದೆ ಮೀನರಾಶಿಯು ಸಮುದ್ರ, ನದಿ, ಸರೋವರ, ಮೊದಲಾದ ಸ್ಥಳಗಳನ್ನು ಸೂಚಿಸುತ್ತದೆ. ಈ ಮೂರು ರಾಶಿಗಳನ್ನು ಜಲಚರರಾಶಿಗಳೆಂದು ಕರೆಯುತ್ತಾರೆ.

**27. ನಗರವಾಸಿ ರಾಶಿಗಳು:** ಕನ್ಯಾ, ತುಲಾ ಮತ್ತು ಧನುರಾಶಿಯು ನಗರವಾಸಿರಾಶಿಗಳು ಆಗಿರುತ್ತವೆ.

**28. ಗ್ರಾಮವಾಸಿರಾಶಿಗಳು:** ಮಿಥುನ, ಕುಂಭ, ಮೇಷ ಮತ್ತು ವೃಷಭರಾಶಿ, ಈ ನಾಲ್ಕು ರಾಶಿಗಳು ಗ್ರಾಮವಾಸಿರಾಶಿಗಳು ಆಗಿರುತ್ತವೆ.

**29. ಅರಣ್ಯರಾಶಿಗಳು:** (ವನವಾಸಿ) ಸಿಂಹ ಮತ್ತು ಮಕರರಾಶಿಯ ಪೂರ್ವಾರ್ಧ, ಇವು ವನದಲ್ಲಿ ವಾಸಿಸುವರಾಶಿಗಳು ಆಗಿರುತ್ತವೆ.

**30. ಜಲವಾಸಿ ರಾಶಿಗಳು:** ಕರ್ಕಟಕ, ವೃಶ್ಚಿಕ, ಮೀನ ಮತ್ತು ಮಕರರಾಶಿಯ ಉತ್ತರಾರ್ಧ ಇವು ಜಲವಾಸಿರಾಶಿಗಳು ಆಗಿರುತ್ತವೆ.

**31. ಸತ್ವಗುಣರಾಶಿಗಳು :** ಕರ್ಕಟಕ, ಸಿಂಹ, ಧನು ಮತ್ತು ಮೀನರಾಶಿ ಈ ನಾಲ್ಕು ರಾಶಿಗಳು ಸತ್ವಗುಣರಾಶಿಗಳು ಆಗಿರುತ್ತವೆ.

**32. ರಜೋಗುಣರಾಶಿಗಳು:** ಮೇಷ, ವೃಷಭ, ಮಿಥುನ ಮತ್ತು ತುಲಾರಾಶಿ ಈ ನಾಲ್ಕು ರಾಶಿಗಳು ರಜೋಗುಣರಾಶಿಗಳು ಆಗಿರುತ್ತವೆ

**33. ತಮೋಗುಣರಾಶಿಗಳು:** ಕನ್ಯಾ, ವೃಶ್ಚಿಕ, ಮಕರ ಮತ್ತು ಕುಂಭ ಈ ನಾಲ್ಕು ರಾಶಿಗಳು ತಮೋಗುಣರಾಶಿಗಳು ಆಗಿರುತ್ತವೆ.

**34. ಬ್ರಾಹ್ಮಣವರ್ಣರಾಶಿಗಳು:** ಮೀನ, ವೃಶ್ಚಿಕ ಮತ್ತು ಕರ್ಕಟಕ ಈ ಮೂರು ರಾಶಿಗಳು ಬ್ರಾಹ್ಮಣವರ್ಣರಾಶಿಗಳು ಆಗಿರುತ್ತವೆ.

**35. ಕ್ಷತ್ರಿಯವರ್ಣರಾಶಿಗಳು:** ಮೇಷ, ಸಿಂಹ ಮತ್ತು ಧನು ಈ ಮೂರು ರಾಶಿಗಳು ಕ್ಷತ್ರಿಯವರ್ಣರಾಶಿಗಳು ಆಗಿರುತ್ತವೆ.

**36. ವೈಶ್ಯವರ್ಣರಾಶಿಗಳು:** ವೃಷಭ, ಕನ್ಯಾ ಮತ್ತು ಮಕರ ಈ ಮೂರು ರಾಶಿಗಳು ವೈಶ್ಯವರ್ಣರಾಶಿಗಳು ಆಗಿರುತ್ತವೆ.

**37. ಶೂದ್ರವರ್ಣರಾಶಿಗಳು:** ಮಿಥುನ, ತುಲಾ ಮತ್ತು ಕುಂಭ ಈ ಮೂರು ರಾಶಿಗಳು ಶೂದ್ರವರ್ಣರಾಶಿಗಳು ಆಗಿರುತ್ತವೆ.

**38. ಧಾತುರಾಶಿಗಳು:** ಮೇಷ, ಕರ್ಕಟಕ, ತುಲಾ ಮತ್ತು ಮಕರ ರಾಶಿ ಈ ನಾಲ್ಕು ರಾಶಿಗಳನ್ನು ಧಾತುರಾಶಿಗಳು ಎಂದು ಕರೆಯುತ್ತಾರೆ.

**39. ಮೂಲರಾಶಿಗಳು:** ವೃಷಭ, ಸಿಂಹ, ವೃಶ್ಚಿಕ ಮತ್ತು ಕುಂಭ ರಾಶಿ ಈ ನಾಲ್ಕು ರಾಶಿಗಳನ್ನು ಮೂಲರಾಶಿಗಳು ಎಂದು ಕರೆಯುತ್ತಾರೆ.

**40. ಜೀವರಾಶಿಗಳು:** ಮಿಥುನ, ಕನ್ಯಾ, ಧನು ಮತ್ತು ಮೀನರಾಶಿ ಈ ನಾಲ್ಕು ರಾಶಿಗಳನ್ನು ಜೀವರಾಶಿಗಳು ಎಂದು ಕರೆಯುತ್ತಾರೆ.

**41. ಊರ್ಧ್ವಮುಖರಾಶಿ:** ರವಿಯು ನಿರ್ಗಮಿಸಿದ ರಾಶಿಯನ್ನು ಊರ್ಧ್ವಮುಖರಾಶಿ ಎಂದು ಕರೆಯುತ್ತಾರೆ.

**42. ಅಧೋಮುಖರಾಶಿ:** ರವಿಸ್ಥಿತರಾಶಿಯನ್ನು ಅಧೋಮುಖ ರಾಶಿ ಎಂದು ಕರೆಯುತ್ತಾರೆ.

**43. ತಿರ್ಯಂಜಮುಖರಾಶಿ:** ರವಿಯು ಮುಂದಕ್ಕೆ ಸಂಚರಿಸುವ ರಾಶಿಯನ್ನು ತಿರ್ಯಂಜಮುಖರಾಶಿ ಎಂದು ಕರೆಯುತ್ತಾರೆ.

**44. ದೊಡ್ಡಶಬ್ದರಾಶಿ:** ಮೇಷ, ವೃಷಭ, ಮಿಥುನ, ಸಿಂಹ, ತುಲಾ ಮತ್ತು ಧನುರಾಶಿಯು ದೊಡ್ಡ ಶಬ್ದಮಾಡುವರಾಶಿಗಳು ಆಗಿರುತ್ತವೆ.

**45. ಮಧ್ಯಮಶಬ್ದರಾಶಿ:** ಕನ್ಯಾ, ಕುಂಭ ಮತ್ತು ಮಕರರಾಶಿಗಳು ಮಧ್ಯಮಶಬ್ದರಾಶಿಗಳು ಆಗಿರುತ್ತವೆ.

**46. ನಿಶ್ಶಬ್ದರಾಶಿ:** ಕರ್ಕಟಕ, ವೃಶ್ಚಿಕ ಮತ್ತು ಮೀನರಾಶಿಗಳು ನಿಶ್ಶಬ್ದರಾಶಿಗಳು ಆಗಿರುತ್ತವೆ.

**47. ದೀರ್ಘೋದಯರಾಶಿ:** ಕರ್ಕಟಕ, ಸಿಂಹ, ಕನ್ಯಾ, ತುಲಾ, ವೃಶ್ಚಿಕ ಮತ್ತು ಧನುರಾಶಿ ಈ ಆರು ರಾಶಿಗಳು ದೀರ್ಘೋದಯರಾಶಿಗಳು ಆಗಿರುತ್ತವೆ

48. ಹ್ರಸ್ವೋದಯರಾಶಿ: ಮಕರ, ಕುಂಭ, ಮೀನ, ಮೇಷ, ವೃಷಭ ಮತ್ತು ಮಿಥುನರಾಶಿ ಈ ಆರು ರಾಶಿಗಳು ಹ್ರಸ್ವೋದಯರಾಶಿಗಳು ಆಗಿರುತ್ತವೆ.

| ಬಿಳಿ | ರಕ್ತ | ಬಿಳಿ | ಪಚ್ಚೆ ಗಿಳಿಯ ಬಣ್ಣ |
|---|---|---|---|
| ಕಂದು | | | ಬಿಳಿ ಕೆಂಪು ಮಿಶ್ರಿತ |
| ಸಾಧಾರಣ ಹಳದಿ | ರಾಶಿಗಳ ವರ್ಣಗಳು | | ಹೊಗೆಯಂತೆ ಬಿಳಿ |
| ಪಿಂಗಳ | ಬಂಗಾರ | ಕಪ್ಪು | ಅನೇಕ ಬಣ್ಣಗಳು |

## ೫. ರಾಶಿ ಮತ್ತು ಗ್ರಹಸಂಬಂಧ

ಸೂರ್ಯನಿಂದ ಶನಿಯ ವರೆಗಿನ ಸಪ್ತಗ್ರಹರು ದ್ವಾದಶರಾಶಿಗಳ ಅಧಿಪತಿಗಳು ಆಗಿರುತ್ತಾರೆ. ಮೇಷ ಮತ್ತು ವೃಶ್ಚಿಕ ರಾಶಿಗೆ ಕುಜನು ಅಧಿಪತಿ ಆಗಿರುತ್ತಾನೆ. ವೃಷಭ ಮತ್ತು ತುಲಾರಾಶಿಗೆ ಶುಕ್ರನು ಅಧಿಪತಿ. ಮಿಥುನ ಮತ್ತು ಕನ್ಯಾ ರಾಶಿಗೆ ಬುಧನು ಅಧಿಪತಿ, ಸಿಂಹರಾಶಿಗೆ ರವಿಯು ಅಧಿಪತಿ, ಕರ್ಕಟಕರಾಶಿಗೆ ಚಂದ್ರನು ಅಧಿಪತಿ. ಧನು ಮತ್ತು ಮೀನರಾಶಿಗೆ ಗುರುವು ಅಧಿಪತಿ ಮಕರ ಮತ್ತು ಕುಂಭರಾಶಿಗೆ ಶನಿಯು ಅಧಿಪತಿ ಆಗಿರುತ್ತಾನೆ.

ಮೇಷರಾಶಿಯಿಂದ ವೃಶ್ಚಿಕರಾಶಿಯ ವರೆಗಿನ ಎಂಟು ರಾಶಿಗಳು ಲೌಕಿಕ ರಾಶಿಗಳು ಮತ್ತು ಆ ರಾಶಿಗಳ ಅಧಿಪತಿಗಳು ಲೌಕಿಕಗ್ರಹರು ಆಗಿರುತ್ತಾರೆ. ಧನುರಾಶಿಯಿಂದ ಮೀನರಾಶಿಯ ವರೆಗಿನ ನಾಲ್ಕು ರಾಶಿಗಳು ಪಾರಮಾರ್ಥಿಕ

ರಾಶಿಗಳು ಮತ್ತು ಆ ರಾಶಿಗಳ ಅಧಿಪತಿಗಳಾದ ಗುರು ಮತ್ತು ಶನಿಯು ಆಧ್ಯಾತ್ಮಿಕ ಗ್ರಹರು ಆಗಿರುತ್ತಾರೆ.

ಗ್ರಹರ ಸ್ವಕ್ಷೇತ್ರಗಳು:

| ಗುರು | ಕುಜ | ಶುಕ್ರ | ಬುಧ |
|---|---|---|---|
| ಶನಿ | ಗ್ರಹರ ಸ್ವಕ್ಷೇತ್ರಗಳು | | ಚಂದ್ರ |
| ಶನಿ | | | ರವಿ |
| ಗುರು | ಕುಜ | ಶುಕ್ರ | ಬುಧ |

ಜನನ ಜಾತಕದಲ್ಲಿ ತಮ್ಮ ಅಧಿಪತ್ಯದಲ್ಲಿ ಇರುವ ರಾಶಿಗಳಲ್ಲಿ ಸ್ಥಿತ ಗ್ರಹರನ್ನು ಸ್ವಕ್ಷೇತ್ರಸ್ಥಿತ ಗ್ರಹರು ಎಂದು ಕರೆಯುತ್ತಾರೆ. ನಾಲ್ಕು ಅಥವಾ ಹೆಚ್ಚು ಗ್ರಹರು ಸ್ವಕ್ಷೇತ್ರದಲ್ಲಿ ಇದ್ದರೆ ಜಾತಕನು ಧನವಂತನು, ಭೋಗವಂತನು, ಸುಖವಂತನು, ಕೀರ್ತಿವಂತನು ಆಗುತ್ತಾನೆ. ಸಪ್ತಗ್ರಹರು ಸ್ವಕ್ಷೇತ್ರದಲ್ಲಿ ಇದ್ದಾಗ ಜನಿಸಿದವನು ರಾಜನು ಅಥವಾ ರಾಜತುಲ್ಯನು ಆಗುತ್ತಾನೆ. ಸ್ವಕ್ಷೇತ್ರ ಸ್ಥಿತ ಗ್ರಹರು ಶುಭಫಲವನ್ನು ನೀಡುತ್ತಾರೆ.

## ಗ್ರಹರ ಉಚ್ಚರಾಶಿಗಳು

ಮೇಷರಾಶಿಯು ರವಿಯ ಉಚ್ಚಕ್ಷೇತ್ರ ಆಗಿರುತ್ತದೆ. ವೃಷಭರಾಶಿಯು ಚಂದ್ರನ, ಮಕರರಾಶಿಯು ಕುಜನ, ಕನ್ಯಾರಾಶಿಯು ಬುಧನ, ಕರ್ಕಟಕ ರಾಶಿಯು ಗುರುವಿನ, ಮೀನರಾಶಿಯು ಶುಕ್ರನ ಮತ್ತು ತುಲಾರಾಶಿಯು ಶನಿಯ ಉಚ್ಚಕ್ಷೇತ್ರ ಆಗಿರುತ್ತದೆ. ಉಚ್ಚದ ಗ್ರಹರು ಬಲಿಷ್ಠರು ಮತ್ತು ಉತ್ತಮ ಫಲವನ್ನು ನೀಡುತ್ತಾರೆ.

ಗ್ರಹರ ಉಚ್ಚರಾಶಿಗಳು:

| ಶುಕ್ರ | ರವಿ | ಚಂದ್ರ | |
|---|---|---|---|
| | ಗ್ರಹರ ಉಚ್ಚರಾಶಿಗಳು | | ಗುರು |
| ಕುಜ | | | |
| | | ಶನಿ | ಬುಧ |

ಗ್ರಹರ ನೀಚರಾಶಿಗಳು:

| ಬುಧ | ಶನಿ | | |
|---|---|---|---|
| | ಗ್ರಹರ ನೀಚರಾಶಿಗಳು | | ಕುಜ |
| ಗುರು | | | |
| | ಚಂದ್ರ | ರವಿ | ಶುಕ್ರ |

ಗ್ರಹರ ಉಚ್ಚಸ್ಥಾನಕ್ಕೆ ಆರು ರಾಶಿಗಳನ್ನು (180°) ಕೂಡಿಸಿದರೆ ಆ ರಾಶಿಯು ಗ್ರಹರ ನೀಚರಾಶಿ ಆಗಿರುತ್ತದೆ. ನೀಚರಾಶಿ ಸ್ಥಿತಗ್ರಹರು ಬಲ ಹೀನರು ಮತ್ತು ಅಶುಭಫಲವನ್ನು ನೀಡುತ್ತಾರೆ.

## ದೈವಜ್ಞರ ಸಿದ್ಧಮಂತ್ರ

ಮೂರ್ತಿತ್ವೇ ಪರಿಕಲ್ಪಿತಃ ಶಶಭೃತೋ ವರ್ತ್ಮಾಽಪುನರ್ಜನ್ಮನಾ-
ಮಾತ್ಮೇತ್ಯಾತ್ಮವಿದಾಂ ಕ್ರತುಶ್ಚ ಯಜತಾಂ ಭರ್ತಾಽಮರಜ್ಯೋತಿ
ಷಾಮ್ । ಲೋಕಾನಾಂ ಪ್ರಲಯೋದ್ಭವ ಸ್ಥಿತಿವಿಭುಶ್ಚಾನೇಕಧಾ
ಯಃ ಶ್ರುತೌ । ವಾಚಂ ನಃ ಸ ದದಾತು ನೈಕಕಿರಣಸ್ತ್ರೈಲೋಕ್ಯ-
ದೀಪ್ರೋ ರವಿಃ ॥ ವರಾಹ ಹೋರಾ ॥

1. ಮೂರ್ತಿತ್ವೇ
2. ಪರಿಕಲ್ಪಿತಃ
3. ಶಶಭೃತಃ
4. ವರ್ತ್ಮ
5. ಅಪುನರ್ಜನ್ಮನಾಮ್
6. ಆತ್ಮಾ
7. ಇತಿ
8. ಆತ್ಮವಿದಾಂ
9. ಕ್ರತುಃ
10. ಚ,
11. ಯಜತಾಂ
12. ಭರ್ತಾ
13. ಅಮರ ಜ್ಯೋತಿಷಾಂ
14. ಲೋಕಾನಾಂ
15. ಪ್ರಲಯೋದ್ಭವಸ್ಥಿತಿವಿಭುಃ
16. ಚ.
17. ಅನೇಕಧಾ
18. ಯಃ
19. ಶ್ರುತೌ
20. ವಾಚಂ
21. ನಃ
22. ಸಃ
23. ದದಾತು
24. ನ
25. ಏಕಕಿರಣಃ
26. ತ್ರೈಲೋಕ್ಯದೀಪಃ
27. ರವಿಃ

## ಗ್ರಹರ ಪರಮೋಚ್ಚ ಭಾಗಗಳು:

| | | | |
|---|---|---|---|
| ಶುಕ್ರ 27° | ರವಿ 10° | ಚಂದ್ರ 3° | |
| | ಗ್ರಹರ ಪರಮೋಚ್ಚ ಭಾಗಗಳು | | ಗುರು 5° |
| ಕುಜ 28° | | | |
| | | ಶನಿ 20° | ಬುಧ 15° |

ರವಿಗೆ ಮೇಷರಾಶಿಯ 10ನೇ ಭಾಗವು ಪರಮೋಚ್ಚಭಾಗ ಆಗಿರುತ್ತದೆ. ಹಾಗೆಯೇ ಇತರ ಗ್ರಹರ 'ಪರಮೋಚ್ಚ' ಭಾಗಗಳನ್ನು ಮೇಲಿನ ಕುಂಡಳಿಯಲ್ಲಿ ಕೊಟ್ಟಿರುತ್ತದೆ. ಪರಮೋಚ್ಚದಲ್ಲಿ ಗ್ರಹರಿಗೆ ವಿಶಿಷ್ಟಬಲ ಇರುತ್ತದೆ. ಪರಮೋಚ್ಚ ಸ್ಥಿತಗ್ರಹರು ಅತ್ಯುತ್ತಮ ಶುಭಫಲಗಳನ್ನು ನೀಡುತ್ತಾರೆ.

## ಗ್ರಹರ ಅತಿನೀಚ ಭಾಗಗಳು:

| | | | |
|---|---|---|---|
| ಬುಧ 15° | ಶನಿ 20° | | |
| | ಗ್ರಹರ ಅತಿನೀಚ ಭಾಗಗಳು | | ಕುಜ 28° |
| ಗುರು 5° | | | |
| | ಚಂದ್ರ 3° | ರವಿ 10° | ಶುಕ್ರ 27° |

ಗ್ರಹರ ಪರಮೋಚ್ಚ ಭಾಗಗಳಿಗೆ 180° ಕೂಡಿಸಿದರೆ ಆ ಭಾಗಗಳು ಗ್ರಹರ ಅತಿನೀಚ ಭಾಗಗಳು ಆಗುತ್ತವೆ. ಅತಿನೀಚದಲ್ಲಿ ಸ್ಥಿತಗ್ರಹರು ಅಧಿಕ ಅಶುಭ ಫಲಗಳನ್ನು ನೀಡುತ್ತಾರೆ.

ಗ್ರಹಗಳ ಮೂತ್ರಿಕೋಣ ರಾಶಿ ಮತ್ತು ಭಾಗಗಳು:

| | ಕುಜ 0°ಯಿಂದ 12° | ಚಂದ್ರ 4°ಯಿಂದ 30° | |
|---|---|---|---|
| ಶನಿ 0°ಯಿಂದ 20° | ಗ್ರಹರ ಮೂಲತ್ರಿಕೋಣ ರಾಶಿ ಮತ್ತು ಭಾಗಗಳು | | |
| | | | ರವಿ 0° ಯಿಂದ 20° |
| ಗುರು 0°ಯಿಂದ 10° | | ಶುಕ್ರ 0° ಯಿಂದ 5° | ಬುಧ 16°ಯಿಂದ 20° |

ಮೂಲ ತ್ರಿಕೋಣಸ್ಥಿತಗ್ರಹರು ಸ್ವಕ್ಷೇತ್ರಸ್ಥಿತಗ್ರಹರಿಗಿಂತ ಅಧಿಕ ಶುಭ ಫಲಗಳನ್ನು ನೀಡುತ್ತಾರೆ. ರವಿ, ಕುಜ, ಗುರು, ಶುಕ್ರ, ಮತ್ತು ಶನಿ, ಈ ಐದು ಗ್ರಹರಿಗೆ ಅವರ ವಿಷಮರಾಶಿಯಾದ ಸ್ವಕ್ಷೇತ್ರವೇ ಮೂಲತ್ರಿಕೋಣ ಆಗಿರುತ್ತದೆ. ಚಂದ್ರ ಮತ್ತು ಬುಧನಿಗೆ ಅವರ ಉಚ್ಚರಾಶಿ ಆಗಿರುವ ವೃಷಭ ಮತ್ತು ಕನ್ಯಾರಾಶಿಯು ಮೂಲತ್ರಿಕೋಣ ಆಗಿರುತ್ತದೆ.

## ೬. ಸೌರ ವ್ಯೂಹ

ಆಕಾಶಗಂಗೆಯಲ್ಲಿರುವ ವಿಲಿಯಾಂತರ ನಕ್ಷತ್ರಗಳಲ್ಲಿ ಸೂರ್ಯನು ಒಂದು ನಕ್ಷತ್ರ ಆಗಿರುತ್ತಾನೆ. ಸೂರ್ಯನ ಆಕರ್ಷಣಾಶಕ್ತಿಯಿಂದ ಸೂರ್ಯ ಮಂಡಲದ ಸಕಲ ಗ್ರಹರು ನಿರ್ದಿಷ್ಟಪಥದಲ್ಲಿ ಸೂರ್ಯನ ಸುತ್ತಲೂ ನಿರಂತರ ಚಲಿಸುತ್ತ ಇದ್ದಾರೆ. ಸೂರ್ಯದ ಪ್ರಭಾವದಲ್ಲಿ ಇರುವ ಈ ಗ್ರಹಸಮೂಹದ ಬೃಹತ್ಕ್ಷೇತ್ರವು ಸೌರವ್ಯೂಹ ಆಗಿರುತ್ತದೆ.

ಸೂರ್ಯನು ಸೌರವ್ಯೂಹದ ಮಧ್ಯಬಿಂದು ಆಗಿರುತ್ತಾನೆ. ಇವನ ಸುತ್ತಲೂ ಪರಿಭ್ರಮಿಸುವ ಗ್ರಹರ ಸಾಮಾನ್ಯ ಪರಿಭ್ರಮಣಕಾಲ ಮತ್ತು ಅಂತರವನ್ನು ಮುಂದೆ ಬರೆದಿರುತ್ತದೆ.

| ಗ್ರಹ | ಸೂರ್ಯನಿಂದ ಅಂತರ | ಪರಿಭ್ರಮಣಕಾಲ |
|---|---|---|
| ಬುಧ | 36 ಮಿಲಿಯ ಮೈಲು | 89 ದಿನ |
| ಶುಕ್ರ | 67 ,, | 224 ದಿನ |
| ಭೂಮಿ | 93 ,, | 365.25 ದಿನ |
| ಕುಜ | 140 ,, | 687 ದಿನ |
| ಗುರು | 476 ,, | 11 ವರ್ಷ 10 ತಿಂಗಳು 18 ದಿನ |
| ಶನಿ | 872 ,, | 29 ವರ್ಷ 9 ತಿಂಗಳು |

ಚಂದ್ರನು ಭೂಮಿಯ ಉಪಗ್ರಹನು ಆಗಿರುತ್ತಾನೆ. ಇವನಿಗೆ ಭೂಮಿಯ ಸುತ್ತು ಪರಿಭ್ರಮಿಸಲು $27\frac{1}{3}$ದಿನ ಸಾಮಾನ್ಯವಾಗಿ ತಗಲುತ್ತದೆ.

ರಾಶಿಚಕ್ರದಲ್ಲಿ ಸೂರ್ಯ ಬುಧರ ಅಂತರವು 28° ಮತ್ತು ಸೂರ್ಯ ಶುಕ್ರರ ಅಂತರವು 48°ಗಿಂತ ಅಧಿಕ ಸಾಮಾನ್ಯವಾಗಿ ಇರುವುದಿಲ್ಲ. ಶುಕ್ರ-ಬುಧರ ಮಹತ್ತಮ ಅಂತರ 76°ಗಿಂತ ಅಧಿಕ ಇರುವುದಿಲ್ಲ.

ರಾಶಿಚಕ್ರವನ್ನು ದಾಟಲು ಗ್ರಹರಿಗೆ ತಗಲುವ ಕಾಲ:–

1. ಸೂರ್ಯ, ಬುಧ ಮತ್ತು ಶುಕ್ರನಿಗೆ ಒಂದು ರಾಶಿಯನ್ನು ದಾಟಲು ಸಾಮಾನ್ಯವಾಗಿ ಒಂದು ತಿಂಗಳುಕಾಲ ಮತು ರಾಶಿಚಕ್ರವನ್ನು ದಾಟಲು ಒಂದು ವರ್ಷಕಾಲ ತಗಲುತ್ತದೆ. 2. ಕುಜನಿಗೆ ಒಂದು ರಾಶಿ ದಾಟಲು ನಾಲ್ವತ್ತೈದು ದಿನಗಳು. ವಕ್ರನಾದಾಗ ಮೂರರಿಂದ ನಾಲ್ಕು ತಿಂಗಳು ಮತ್ತು ರಾಶಿಚಕ್ರ ದಾಟಲು ಒಂದು ವರ್ಷ ಹತ್ತು ತಿಂಗಳು ಹದಿನೈದು ದಿನ ಕಾಲ ತಗಲುತ್ತದೆ. 3. ಗುರುವಿಗೆ ಒಂದು ರಾಶಿ ದಾಟಲು ಒಂದು ವರ್ಷಕಾಲ ಮತ್ತು ರಾಶಿಚಕ್ರ ದಾಟಲು ಹನ್ನೊಂದು ವರ್ಷ ಹತ್ತು ತಿಂಗಳು ಕಾಲ ತಗಲುತ್ತದೆ. 4. ಶನಿಗೆ ಒಂದು ರಾಶಿ ದಾಟಲು ಎರಡುವರೆವರ್ಷ ಮತ್ತು ರಾಶಿಚಕ್ರ ದಾಟಲು ಇಪ್ಪತ್ತೊಂಬತ್ತು ವರ್ಷ ಒಂಬತ್ತು ತಿಂಗಳು ಕಾಲ ತಗಲುತ್ತದೆ. 5. ಚಂದ್ರನಿಗೆ ಒಂದು ರಾಶಿಯನ್ನು ದಾಟಲು ಎರಡುಕಾಲು ದಿನ ಮತ್ತು ರಾಶಿಚಕ್ರ ದಾಟಲು ಇಪ್ಪತ್ತೇಳುವರೆ ದಿನ ತಗಲುತ್ತದೆ. ಇವೆಲ್ಲ ಗ್ರಹರಿಗೆ ರಾಶಿಚಕ್ರವನ್ನು ದಾಟಲು ಸ್ಥೂಲಮಾನದಿಂದ ತಗಲುವ ಕಾಲ ಆಗಿರುತ್ತದೆ. 6. ರಾಹು. ಕೇತುಗಳಿಗೆ ಒಂದು ರಾಶಿ ದಾಟಲು 565 ದಿನ ಮತ್ತು ರಾಶಿಚಕ್ರ ದಾಟಲು ಹದಿನೆಂಟು ವರ್ಷ ಮೂರು ತಿಂಗಳು ಕಾಲ ತಗಲುತ್ತದೆ.

## ೭. ಕ್ಷಿತಿಜದಲ್ಲಿ ರಾಶಿಚಕ್ರ ಮತ್ತು ಗ್ರಹದೃಶ್ಯ:

'ಲಗ್ನದ ಅನುದಿತಭಾಗದಿಂದ ಸಪ್ತಮಭಾವದ ಅನುದಿತಭಾಗದ ತನಕ ಇರುವ ರಾಶಿಚಕ್ರದ ಅರ್ಧಭಾಗವನ್ನು ಅದೃಶ್ಯಾರ್ಧ ಎಂದು ಕರೆಯುತ್ತಾರೆ, ರಾಶಿಚಕ್ರದ ಉಳಿದಭಾಗ ಅಂದರೆ ಸಪ್ತಮಭಾವದ ಉದಿತಭಾಗದಿಂದ ಲಗ್ನದ ಉದಿತಭಾಗದ ತನಕ ಇರುವ ಭಾಗವನ್ನು ದೃಶ್ಯಾರ್ಧ ಎಂದು ಕರೆಯುತ್ತಾರೆ.

ದಶಮಭಾವ ಮಧ್ಯದಿಂದ ಚತುರ್ಥಭಾವ ಮಧ್ಯದ ಭಾಗವನ್ನು ಪೂರ್ವಾರ್ಧ ಎಂದು ಕರೆಯುತ್ತಾರೆ, ರಾಶಿಚಕ್ರದ ಉಳಿದ ಅಂಶ ಅಂದರೆ ಚತುರ್ಥಭಾವ ಮಧ್ಯದಿಂದ ದಶಮಭಾವ ಮಧ್ಯದ ತನಕ ಇರುವ ಭಾಗವನ್ನು ಪಶ್ಚಿಮಾರ್ಧ ಎಂದು ಕರೆಯುತ್ತಾರೆ.

ಲಗ್ನವನ್ನು ಉದಯ ಎಂದು, ಚತುರ್ಥಭಾವವನ್ನು ಪಾತಾಳ ಎಂದು, ಸಪ್ತಮಭಾವ ಅಸ್ತ ಎಂದು, ದಶಮಭಾವವನ್ನು ಆಕಾಶ ಎಂದು ಕರೆಯುತ್ತಾರೆ.

ಲಗ್ನದಿಂದ ಚತುರ್ಥಭಾವ ಮಧ್ಯದ ತನಕ ಗ್ರಹರು ಪೂರ್ವಾರ್ಧದಲ್ಲಿ ಹಾಗೂ ಅದೃಶ್ಯಾರ್ಧದಲ್ಲಿ ಇರುತ್ತಾರೆ, ಈ ಗ್ರಹರನ್ನು ಉದಯಾಭಿಲಾಷಿ ಗ್ರಹರು ಎಂದು ಕರೆಯುತ್ತಾರೆ.

ಚತುರ್ಥಭಾವ ಮಧ್ಯದಿಂದ ಸಪ್ತಮಭಾವ ಮಧ್ಯದ ತನಕ ಇರುವ ಗ್ರಹರು ಪಶ್ಚಿಮಾರ್ಧದಲ್ಲಿ ಹಾಗೂ ಅದೃಶ್ಯಾರ್ಧದಲ್ಲಿ ಇರುತ್ತಾರೆ, ಈ ಗ್ರಹರನ್ನು ಪಾತಾಳಾಭಿಲಾಷಿ ಗ್ರಹರು ಎಂದು ಕರೆಯುತ್ತಾರೆ,

ಸಪ್ತಮಭಾವ ಮಧ್ಯದಿಂದ ದಶಮಭಾವ ಮಧ್ಯದ ತನಕ ಇರುವ ಗ್ರಹರು ಪಶ್ಚಿಮಾರ್ಧದಲ್ಲಿ ಹಾಗೂ ದೃಶ್ಯಾರ್ಧದಲ್ಲಿ ಇದ್ದಾರೆ. ಈ ಗ್ರಹರನ್ನು ಅಸ್ತಾಭಿಲಾಷಿ ಗ್ರಹರು ಎಂದು ಕರೆಯುತ್ತಾರೆ.

ದಶಮಭಾವ ಮಧ್ಯದಿಂದ ಲಗ್ನದ ಉದಿತಭಾಗದ ವರೆಗೆ ಇರುವ ಗ್ರಹರು ಪೂರ್ವಾರ್ಧದಲ್ಲಿ ಹಾಗೂ ದೃಶ್ಯಾರ್ಧದಲ್ಲಿ ಇರುತ್ತಾರೆ. ಈ ಗ್ರಹರನ್ನು ಮಧ್ಯಾಹ್ನಾಭಿಲಾಷಿ ಗ್ರಹರು ಎಂದು ಕರೆಯುತ್ತಾರೆ.

ಮಧ್ಯಾಹ್ನಾಭಿಲಾಷಿಗ್ರಹರು ಆದಿತ್ರಿಭಾಗದಲ್ಲಿ ಶುಭಫಲವನ್ನು, ಉದಯಾಭಿಲಾಷಿಗ್ರಹರು ವಯಸ್ಸಿನ ಮಧ್ಯತ್ರಿಭಾಗದಲ್ಲಿ ಶುಭಫಲವನ್ನು, ಅಸ್ತಾಭಿಲಾಷಿಗ್ರಹರು ಮಿಶ್ರಫಲವನ್ನು ಪಾತಾಳಾಭಿಲಾಷಿಗ್ರಹರು ಅಂತ್ಯತ್ರಿಭಾಗದಲ್ಲಿ ಅಶುಭಫಲವನ್ನು ನೀಡುತ್ತಾರೆ.

## ೮. ಗ್ರಹರ ಕಾರಕತ್ವ, ಸ್ವರೂಪಾದಿಗಳು

**1. ಸೂರ್ಯ:** ರವಿಯು ಕಾಲಪುರುಷನ ಆತ್ಮಕಾರಕ ಗ್ರಹನು ಆಗಿರುತ್ತಾನೆ. ಇವನು ರಾಜಗ್ರಹನು, ಕ್ಷತ್ರಿಯನು, ಸ್ಥಿರಸ್ವಭಾವದವನು, ಸ್ವಪ್ರಕಾಶಕಗ್ರಹನು, ರಕ್ತ-ಶ್ಯಾಮ ಬಣ್ಣದವನು, ಉಚ್ಚರಾಶಿಯಲ್ಲಿ ಇರುವಾಗ ರಕ್ತದಂತೆ ಕೆಂಪುಬಣ್ಣ ಮತ್ತು ನೀಚರಾಶಿಯಲ್ಲಿ ಶ್ಯಾಮವರ್ಣದವನು ಆಗಿರುತ್ತಾನೆ. ರವಿಯು ಪುರುಷಗ್ರಹನು, ಕ್ರೂರಗ್ರಹನು, ಸತ್ವಗುಣ ಉಳ್ಳವನು, ಸಾರ್ವಭೌಮನು, ಚತುಷ್ಪಾದಗ್ರಹನು, ಶುಷ್ಕಗ್ರಹನು ಪಿತೃಕಾರಕನು ಆಗಿರುತ್ತಾನೆ. ಇವನು ತಾಮ್ರವರ್ಣಕ್ಕೆ ಅಧಿಪತಿ ಮತ್ತು ಇವನ ಧಾತುವು ತಾಮ್ರ ಆಗಿರುತ್ತದೆ. ಇವನು ಜೇನಿನಂತೆ ಹಳದಿ ಬಣ್ಣದ ಕಣ್ಣುಗಳು ಉಳ್ಳವನು, ದೂಷಿತನಾದಾಗ ವಿಕೃತನಯನ ಉಳ್ಳವನು, ಸ್ವಲ್ಪಕೂದಲು ಉಳ್ಳವನು, ಅಥವಾ ಕೂದಲು ಉದುರಿ ಹೋದವನು, ಚತುರಸ್ರದೇಹ ಉಳ್ಳವನು, ಪಿತ್ತಪ್ರಕೃತಿಯವನು ಆಗಿರುತ್ತಾನೆ. ನಮ್ಮ ಶರೀರದಲ್ಲಿರುವ ಎಲುಬುಗಳಿಗೆ ರವಿಯು ಕಾರಕನು ಆಗಿರುತ್ತಾನೆ. ಇವನು ಪಿತ್ತಪ್ರಧಾನ ಗ್ರಹನು ಆದ್ದರಿಂದ ಶರೀರದಲ್ಲಿ ದಾಹ, ಉಷ್ಣ, ಜ್ವರ ಇತ್ಯಾದಿಗಳನ್ನು ನೀಡುತ್ತಾನೆ.

ಇವನ ವಾಸಸ್ಥಾನ ದೇವಾಲಯ, ಅಗ್ನಿಯು ಅಧಿದೇವತೆ, ರುದ್ರನು ಆರಾಧ್ಯದೇವತೆ, ಮತ್ತು ಇವನು ಅಗ್ನಿಗೆ ಅಧಿಪತಿ ಆಗಿರುತ್ತಾನೆ. ಮರ ಮಟ್ಟುಗಳಿಂದ ಕೂಡಿದ ದೃಢವಲ್ಲದ ಹಳತಾದಮನೆ, ಸ್ಥೂಲವಾದ ವಸ್ತ್ರ, ಖಾರರಸ, ಗ್ರೀಷ್ಮಋತು ರವಿಯ ಅಧಿಪತ್ಯದಲ್ಲಿ ಇರುತ್ತವೆ. ಇವನ ರತ್ನವು ಮಾಣಿಕ್ಯ ಮತ್ತು ರವಿಯು ಪೂರ್ವದಿಕ್ಕಿನ ಅಧಿಪತಿ ಆಗಿರುತ್ತಾನೆ.

ಇವನ ಪ್ರೀತ್ಯರ್ಥ ಹೋಮಾದಿ ಅಗ್ನಿಯ ಆರಾಧನೆ, ರುದ್ರಪೂಜಾದಿಗಳನ್ನು ಮತ್ತು ಗೋದಿದಾನ ಮಾಡುತ್ತಾರೆ. ಇವನ ಕಾಲಮಾನ ಅಯನ. (ಆರುತಿಂಗಳು).

ಮೇಷರಾಶಿಯು ರವಿಯ ಉಚ್ಚಕ್ಷೇತ್ರ, ಮೇಷರಾಶಿಯ 10ನೇ ಭಾಗವು ಇವನ ಪರಮೋಚ್ಚ ಸಿಂಹರಾಶಿಯ 0° ಯಿಂದ 20°ಯ ವರೆಗಿನ ಭಾಗಗಳು ಇವನ ಮೂಲತ್ರಿಕೋಣ, ಸಿಂಹರಾಶಿಯ ಉಳಿದ ಅಂಶವು ಇವನ ಸ್ವಕ್ಷೇತ್ರ, ತುಲಾರಾಶಿಯು ಇವನ ನೀಚಕ್ಷೇತ್ರ, ಮತ್ತು ತುಲಾರಾಶಿಯ 10ನೇ ಭಾಗವು ಇವನ ಅತಿನೀಚಭಾಗ ಆಗಿರುತ್ತದೆ.

2. ಚಂದ್ರ : ಚಂದ್ರನು ಕಾಲಪುರುಷನ ಮನೋಕಾರಕನು ಆಗಿರುತ್ತಾನೆ. ಇವನಿಗೆ ರಾಣಿಯ ಸ್ಥಾನವನ್ನು ಕೊಡಲಾಗಿದೆ. ಇವನನ್ನು ಪ್ರಕಾಶಕಗ್ರಹನೆಂದು ಕರೆಯುತ್ತಾರೆ. ಇವನ ಬಣ್ಣ ಬಿಳಿ ಮತ್ತು ಬಿಳಿಬಣ್ಣಕ್ಕೆ ಅಧಿಪತಿ ಆಗಿರುತ್ತಾನೆ. ಶುಕ್ಲಪಕ್ಷದ ಅಷ್ಟಮಿಯಿಂದ ಕೃಷ್ಣ ಪಕ್ಷದ ಅಷ್ಟಮಿಯ ವರೆಗಿನ ಚಂದ್ರನನ್ನು ಪೂರ್ಣಚಂದ್ರನು ಎಂದು ಕರೆಯುತ್ತಾರೆ. ಕೃಷ್ಣಪಕ್ಷದ ಅಷ್ಟಮಿಯಿಂದ ಶುಕ್ಲ ಪಕ್ಷದ ಅಷ್ಟಮಿಯ ವರೆಗಿನ ಚಂದ್ರನನ್ನು ಕ್ಷೀಣಚಂದ್ರನು ಎಂದು ಕರೆಯುತ್ತಾರೆ. ಪೂರ್ಣಚಂದ್ರನು ಶುಭಗ್ರಹನು. ಮತ್ತು ಕ್ಷೀಣಚಂದ್ರನು ಪಾಪಗ್ರಹನು ಆಗಿರುತ್ತಾನೆ. ಚಂದ್ರನು ಸ್ತ್ರೀ ಗ್ರಹನು, ವೈಶ್ಯ ವರ್ಣದವನು, ಸತ್ವಗುಣ ಉಳ್ಳವನು, ಮಾತೃಕಾರಕನು, ಪ್ರಾಜ್ಞನು, ಚಂಚಲಸ್ವಭಾವದವನು, ಮೃದುವಾದ ಮಾತುಗಳನ್ನು ಆಡುವವನು, ಸರಿಸೃಪಗ್ರಹನು ಆಗಿರುತ್ತಾನೆ. ಚಂದ್ರನು ಗುಂಡಾದ ಮೈಉಳ್ಳವನು, ಉರುಟಾದ ದೇಹ ಮತ್ತು ಆಕರ್ಷಕ ಕಣ್ಣುಗಳು ಉಳ್ಳವನು, ವಾತ-ಕಫ ಪ್ರಕೃತಿಯವನು ಆಗಿರುತ್ತಾನೆ. ಇವನು ದೇಹದಲ್ಲಿರುವ ರಕ್ತಕ್ಕೆ ಅಧಿಪತಿ ಆಗಿರುತ್ತಾನೆ. ಇವನ ವಾಸಸ್ಥಾನ ಸಮುದ್ರ, ನದಿ, ಕೆರೆ, ಬಾವಿ, ಇತ್ಯಾದಿ ಜಲಪ್ರದೇಶ ಆಗಿರುತ್ತದೆ. ಜಲವು ಇವನ ಅಧಿದೇವತೆ, ಜಲಕ್ಕೆ ಇವನು ಅಧಿಪತಿ ಮತ್ತು ಇವನನ್ನು ಸಜಲಗ್ರಹ ಎಂದು ಕರೆಯುತ್ತಾರೆ, ವರ್ಷಾಋತು, ನೂತನವಸ್ತ್ರ, ಲವಣರಸ, ರತ್ನದ್ರವ್ಯ ಮುಕ್ತಾಮಣಿ ಚಂದ್ರನ ಅಧಿಪತ್ಯದಲ್ಲಿರುತ್ತದೆ. ಇವನು ವಾಯುವ್ಯ ದಿಕ್ಕಿನ ಅಧಿಪತಿ ಆಗಿರುತ್ತಾನೆ.

ಚಂದ್ರನ ಕಾಲಮಾನ ಒಂದು ಕ್ಷಣ ಅಥವಾ ಮುಹೂರ್ತ ಅಂದರೆ 48 ಮಿನಿಟುಗಳು ಆಗಿರುತ್ತದೆ. ಚಂದ್ರನು ಜಲದ ಅಧಿಪತಿ ಆಗಿರುವುದರಿಂದ ಧಾರಾಶಂಖಾಭಿಷೇಕ ಇವನ ಪ್ರೀತ್ಯರ್ಥ ಮಾಡುತ್ತಾರೆ, ಪಾಪರಾಶಿಗಳಲ್ಲಿರುವ ಚಂದ್ರನಿಗೆ ಹರಪೂಜೆ, ಶುಭರಾಶಿಗಳಲ್ಲಿರುವ ಚಂದ್ರನಿಗೆ ಹರಿಪೂಜೆ ಮತ್ತು ಉಗ್ರರಾಶಿಗಳಲ್ಲಿರುವ ಚಂದ್ರನಿಗೆ ದುರ್ಗಾಪೂಜೆ ಮಾಡುತ್ತಾರೆ. ಅಕ್ಕಿದಾನ ಮಾಡುತ್ತಾರೆ.

ವೃಷಭರಾಶಿಯು ಚಂದ್ರನ ಉಚ್ಚಕ್ಷೇತ್ರ. ವೃಷಭರಾಶಿಯ ಮೂರನೇ ಭಾಗವು ಇವನ ಪರಮೋಚ್ಚ, 3°ಯಿಂದ 30°ಯ ವರೆಗಿನ ವೃಷಭರಾಶಿಯ ಉಳಿದ ಅಂಶವು ಇವನ ಮೂಲ ತ್ರಿಕೋಣ ಆಗಿರುತ್ತದೆ. ಕರ್ಕಟರಾಶಿಯು ಇವನ ಸ್ವಕ್ಷೇತ್ರ ಆಗಿರುತ್ತದೆ. ವೃಶ್ಚಿಕರಾಶಿಯು ಇವನ ನೀಚಕ್ಷೇತ್ರ ಮತ್ತು ವೃಶ್ಚಿಕರಾಶಿಯ ಮೂರನೇ ಭಾಗವು ಇವನ ಅತಿನೀಚ ಭಾಗ ಆಗಿರುತ್ತದೆ.

3. **ಕುಜ :** ಕುಜನು ಕಾಲಪುರುಷನ ಸತ್ವಕಾರಕನು, ಶೌರ್ಯಕಾರಕನು ಆಗಿರುತ್ತಾನೆ. ಇವನು ಸೇನಾಧಿಪತಿಯೂ, ತಾರಾಗ್ರಹನೂ, ಕೆಂಪು ಬಿಳಿಯ ಬಣ್ಣದವನು ಉಚ್ಚರಾಶಿಯಲ್ಲಿ ಇರುವಾಗ ರಕ್ತವರ್ಣ ಮತ್ತು ನೀಚರಾಶಿಯಲ್ಲಿ ಬಿಳಿ ಬಣ್ಣದವನು, ಆಗಿರುತ್ತಾನೆ. ಕುಜನು ಪುರುಷಗ್ರಹನು ಪಾಪಗ್ರಹನು, ಕ್ಷತ್ರಿಯಗ್ರಹನು, ಉಗ್ರಸ್ವಭಾವದವನು, ತಮೋಗುಣ ಉಳ್ಳವನು, ಶುಷ್ಕ ಗ್ರಹನು, ಚತುಷ್ಪಾದ ಗ್ರಹನು, ಭ್ರಾತೃಕಾರಕನು ಆಗಿರುತ್ತಾನೆ. ಇವನು ರಕ್ತದಂತೆ ಅತಿ ಕೆಂಪು ಬಣ್ಣಕ್ಕೆ ಅಧಿಪತಿ. ಇವನ ಧಾತುವು ಬಂಗಾರ, ಹವಳ ಆಗಿರುತ್ತದೆ. ಕುಜನು ಮಧ್ಯಮ ನಿಲುವಿನವನು, ತರುಣ ಮೂರ್ತಿಯೂ, ಸೊಂಟದ ಹತ್ತಿರ ಕೃಶನು, ಕ್ರೂರದೃಷ್ಟಿ ಉಳ್ಳವನು, ದೀಪ್ತಾಗ್ನಿ ಉಳ್ಳವನು, ಪಿತ್ತಪ್ರಕೃತಿಯವನು ಆಗಿರುತ್ತಾನೆ. ಎಲುಬಿನಲ್ಲಿರುವ ಮಜ್ಜಾಧಾತುವಿಗೆ ಕುಜನು ಕಾರಕನು ಆಗಿರುತ್ತಾನೆ. ಇವನು ಉದಾರನು, ದಾನಿಯೂ, ಆದರೆ ಕೀರ್ತಿಪ್ರಿಯನು, ಸಾಹಸಿಕನು ಮತ್ತು ಕ್ರೂರ ಕರ್ಮಗಳನ್ನು ಮಾಡುವವನು ಚಂಚಲಸ್ವಭಾವದವನು ಆಗಿರುತ್ತಾನೆ. ಅಗ್ನಿ ಇರುವಲ್ಲಿ ಇವನ ವಾಸಸ್ಥಾನ ಆಗಿರುತ್ತದೆ.

ಸುಬ್ರಮಣ್ಯನು ಕುಜನ ಅಧಿದೇವತೆ, ಸ್ಥಿರರಾಶಿಸ್ಥಿತ ಕುಜನ ಪ್ರೀತ್ಯರ್ಥ ಸ್ವಗೃಹದಲ್ಲಿ ಷಷ್ಠ್ಯಾದಿಪೂಜೆಯನ್ನು ಮತ್ತು ಚರರಾಶಿಗಳಲ್ಲಿರುವ ಕುಜನ ಪ್ರೀತ್ಯರ್ಥ ಸುಬ್ರಮಣ್ಯದೇವಾಲಯದಲ್ಲಿ ಪೂಜೆ, ಸೇವೆ, ತೊಗರಿದಾನ ಮಾಡು ತ್ತಾರೆ ಮತ್ತು ಇವನು ಪಂಚಮಹಾಭೂತಗಳಲ್ಲಿ ಅಗ್ನಿಗೆ ಅಧಿಪತಿ, ಆಗಿರುತ್ತಾನೆ. ಸುಟ್ಟಬಟ್ಟೆ, ಕಹಿರಸ, ಗ್ರೀಷ್ಮ ಋತು ಸಾಮವೇದ, ದಕ್ಷಿಣದಿಕ್ಕು ಇವೆಲ್ಲ ಕುಜನ ಅಧಿಪತ್ಯದಲ್ಲಿ ಇರುತ್ತವೆ. ಸಾಮಾನ್ಯವಾಗಿ ತಾರುಣ್ಯದಲ್ಲಿ ಕುಜನು ತನ್ನ ಶುಭಾಶುಭ ಫಲಗಳನ್ನು ನೀಡುತ್ತಾನೆ. ಕುಜನ ಕಾಲಮಾನವು ಒಂದು ದಿನ ಆಗಿರುತ್ತದೆ.

ಮಕರರಾಶಿಯು ಕುಜನ ಉಚ್ಚಕ್ಷೇತ್ರ, ಮಕರರಾಶಿಯ 28ನೇ ಭಾಗವು ಇವನ ಪರಮೋಚ್ಚ, ಮೇಷ ಮತ್ತು ವೃಶ್ಚಿಕರಾಶಿಗಳು ಇವನ ಸ್ವಕ್ಷೇತ್ರ, ಮೇಷರಾಶಿಯಲ್ಲಿ 0°ಯಿಂದ 12°ಯ ವರೆಗಿನ ಅಂಶವು ಇವನ ಮೂಲತ್ರಿಕೋಣ ಆಗಿರುತ್ತದೆ, ಕರ್ಕಟಕರಾಶಿಯು ಇವನ ನೀಚಕ್ಷೇತ್ರ ಮತ್ತು ಕರ್ಕಟಕರಾಶಿಯ 28ನೇ ಭಾಗವು ಇವನ ಅತಿನೀಚ ಭಾಗ ಆಗಿರುತ್ತವೆ.

4. ಬುಧ: ಬುಧನು ಕಾಲಪುರುಷನ ವಾಣಿಕಾರಕನು ಆಗಿರುತ್ತಾನೆ. ಇವನು ಯುವರಾಜನು, ತಾರಾಗ್ರಹನು, ಗರಿಕೆ ಹುಲ್ಲಿನ ಹಾಗೆ ಪಚ್ಚೆ ಬಣ್ಣದವನು, ಆಗಿರುತ್ತಾನೆ. ಬುಧನು ಸ್ತ್ರೀನಪುಂಸಕಗ್ರಹನು, ಸೌಮ್ಯಸ್ವಭಾವದವನು, ನೈಸರ್ಗಿಕವಾಗಿ ಶುಭಗ್ರಹನು. ಪಾಪಗ್ರಹನಯುತಿಯಲ್ಲಿ ಇದ್ದಾಗ ಪಾಪಗ್ರಹನು ಆಗುತ್ತಾನೆ. ಇವನು ರಜೋಗುಣದವನು. ಜಾತಿಯಲ್ಲಿ ಶೂದ್ರನು. ಯಾವಾಗಲೂ ಹಾಸ್ಯ, ವ್ಯಂಗ್ಯವಾದ ಮತ್ತು ಉತ್ತಮವಾದ ಮಾತುಗಳು. ಪಾಂಡಿತ್ಯ. ಕಲಾಕುಶಲತೆ, ವಿದ್ಯಾವಂತರಿಂದ ಹೊಗಳುವಿಕೆ, ವಾಕ್‌ಚಾತುರ್ಯ, ದೇವತಾ ಉಪಾಸನೆ, ಪ್ರವೀಣತೆ, ವಿದ್ಯೆಯಲ್ಲಿ ನಿಪುಣತೆ, ಉಪಾಯ, ಬುದ್ಧಿವಂತಿಕೆ, ಯಜ್ಞ. ಶಿಲ್ಪಕಲೆ, ಸಂಬಂಧಿಕರು, ಮಿತ್ರರು, ತಂಗಿಯ ಮಕ್ಕಳು, ಪಕ್ಷಿಗ್ರಹನು, ಮಾತುಲಕಾರನು ಆಗಿರುತ್ತಾನೆ. ಇವನು ಪಚ್ಚೆ ಬಣ್ಣದ ಅಧಿಪತಿ. ಇವನ ಧಾತು ಹಿತ್ತಾಳೆ. ರತ್ನವು ಮರಕತ ಆಗಿರುತ್ತದೆ. ಪಂಚ ಮಹಾಭೂತಗಳಲ್ಲಿ ಬುಧನು ಭೂತತ್ವಕ್ಕೆ ಅಧಿಪತಿ ಆಗಿರುತ್ತಾನೆ. ಇವನು ಸನ್ನಿಪಾತ ಪ್ರಕೃತಿಯವನು, ತ್ರಿದೋಷಾತ್ಮಕನು. ಚರ್ಮಕ್ಕೆ ಕಾರಕನು ಆಗಿರುತ್ತಾನ. ಕ್ರೀಡಾಭವನ ವಿಹಾರಸ್ಥಳ ಇವನ ವಾಸಸ್ಥಾನ ಆಗಿರುತ್ತದೆ. ಶರದ್ ಋತು ಅಥರ್ವವೇದ ಮಿಶ್ರರಸ, ತೂಯ್ದುಬಟ್ಟೆ, ಉತ್ತರದಿಕ್ಕು ಬುಧನ ಅಧಿಪತ್ಯದಲ್ಲಿ ಇವೆ. ಇವನನ್ನು ಚಂದ್ರನ ಪುತ್ರನೆಂದು ಕರೆಯುತ್ತಾರೆ.

ಬುಧನ ಕಾಲಮಾನವು ಒಂದು ಋತು, (ಎರಡು ತಿಂಗಳು) ಆಗಿರುತ್ತದೆ. ಬುಧನಿಗೆ ವಿಷ್ಣುವು ಅಧಿದೇವತೆ ಮತ್ತು ಇವನ ಪ್ರೀತ್ಯರ್ಥ ಶ್ರವಣಪೂಜೆ ವಿಷ್ಣು ಸಹಸ್ರನಾಮ ಪಾರಾಯಣೆ ಮತ್ತು ಹೆಸರು ದಾನ ಮಾಡುತ್ತಾರೆ. ವಿಷ್ಣುವಿನ ಅವತಾರವಾದ ರಾಮ. ಕೃಷ್ಣ. ಬಾಲಕೃಷ್ಣ ಮೊದಲಾದ ದೇವರನ್ನು ಮತ್ತು ಜಪ, ಪೂಜೆ ಸೂಚಿಸುತ್ತಾನೆ.

ಕನ್ಯಾರಾಶಿಯು ಬುಧನ ಉಚ್ಚರಾಶಿ, ಕನ್ಯಾರಾಶಿಯಲ್ಲಿ 14 ಭಾಗದ ವರೆಗೆ ಬುಧನ ಉಚ್ಚಕ್ಷೇತ್ರ 14ರಿಂದ 15ನೇ ಭಾಗದ ತನಕ ಪರಮೋಚ್ಚ, 15ನೇ ಭಾಗದಿಂದ 20ನೇ ಭಾಗದ ವರೆಗೆ ಮೂಲತ್ರಿಕೋಣ. 20 ಭಾಗದಿಂದ ಉಳಿದ 30 ಭಾಗದ ತನಕ ಮತ್ತು ಮಿಥುನ ರಾಶಿಯು ಇವನ ಸ್ವಕ್ಷೇತ್ರ ಆಗಿರುತ್ತದೆ. ಮೀನರಾಶಿಯು ಇವನ ನೀಚಕ್ಷೇತ್ರ ಮತ್ತು ಮೀನರಾಶಿಯ 15ನೇ ಭಾಗವು ಬುಧನ ಅತಿನೀಚಭಾಗ ಆಗಿರುತ್ತದೆ.

5. ಗುರು : ಗುರುವು ಕಾಲಪುರುಷನ ಪಾರಮಾರ್ಥಿಕ ಜ್ಞಾನಕಾರಕನು, ಧಾರ್ಮಿಕ ಮತ್ತು ಆಧ್ಯಾತ್ಮಿಕ ವ್ಯವಹಾರಗಳ ಮಂತ್ರಿಯು, ಯಾಗ ಮತ್ತು ಯಜ್ಞಪ್ರವರ್ತಕನು, ವೇದ, ಶಾಸ್ತ್ರ ಇತ್ಯಾದಿ ಬಲ್ಲವನು ಜಿತೇಂದ್ರಿಯನು, ದೇವಬ್ರಾಹ್ಮಣರಲ್ಲಿ ಭಕ್ತಿ, ಶ್ರದ್ಧೆ, ದಯೆ, ಉಳ್ಳವನು, ತ್ಯಾಗ ತಪಸ್ಸು, ಸದ್ಗತಿ ವಿದ್ವತ್ತು, ಸನ್ಮಾನ, ಪ್ರಶಂಶೆ, ಉಳ್ಳವನು ಪುತ್ರಕಾರಕನು, ಸುಖವನ್ನು ನೀಡುವವನು ಆಗಿರುತ್ತಾನೆ. ಗುರುವು ಪರಿಶುದ್ಧವಾದ ಬಂಗಾರದ ಬಣ್ಣ ಉಳ್ಳವನು ಮತ್ತು ಹಳದಿ ಬಣ್ಣದ ಅಧಿಪತಿ ಆಗಿರುತ್ತಾನೆ. ಇವನು ತಾರಾ ಗ್ರಹನು, ದ್ವಿಪಾದಗ್ರಹನು, ಪುರುಷಗ್ರಹನು, ಶುಭಗ್ರಹನು, ಉತ್ತಮ ಬ್ರಾಹ್ಮಣನು, ಸತ್ವಗುಣ ಉಳ್ಳವನು, ಮೃದುಸ್ವಭಾವದವನು, ಈಶಾನ್ಯದಿಕ್ಕಿನ ಅಧಿಪತಿ ಆಗಿರುತ್ತಾನೆ. ಇವನು ಸ್ಥೂಲಕಾಯನು, ಪಿಂಗಲ ವರ್ಣದ ಕಣ್ಣು ಮತ್ತು ಕೂದಲು ಉಳ್ಳವನು, ಕಫಾತ್ಮಕ ಪ್ರಕೃತಿಯವನು, ಶ್ರೇಷ್ಠವಾದ ಬುದ್ಧಿ ಉಳ್ಳವನು, ಮೇಧಸ್ಸು ಮತ್ತು ಮೆದುಳಿನ ಅಧಿಪತಿಯು ಆಗಿರುತ್ತಾನೆ. ಇವನು ಖಜಾನೆಗೆ ಅಧಿಪತಿ, ಮತ್ತು ಕೋಶಾಗಾರ ಅಥವಾ ಖಜಾನೆ ಇರುವ ಸ್ಥಳ ಇವನ ವಾಸಸ್ಥಾನ ಆಗಿರುತ್ತದೆ. ಇವನಿಗೆ ಮಧ್ಯಮ ತರಗತಿಯ ವಸ್ತ್ರ, ಅತ್ಯಂತ ಬಲಿಷ್ಠನಾದಾಗ ಪಟ್ಟೆವಸ್ತ್ರ ಇವನ ಧಾತುವು ಬೆಳ್ಳಿ, ಬಲಿಷ್ಠನಾದಾಗ ಧಾತುವು ಬಂಗಾರ, ಇವನ ರತ್ನ ಪುಷ್ಯರಾಗ ರಸವು ಮಧುರ ಆಗಿರುತ್ತದೆ. ಇವನು ಋಗ್ವೇದದ ಅಧಿಪತಿ, ಇವನ ಋತು ಹೇಮಂತ ಋತು ಆಗಿರುತ್ತದೆ. ಪಂಚ ಮಹಾಭೂತಗಳಲ್ಲಿ ಆಕಾಶತತ್ವಕ್ಕೆ ಅಧಿಪತಿ ಆಗಿರುತ್ತಾನೆ.

ಗುರುವಿನ ಕಾಲಮಾನ ಒಂದು ತಿಂಗಳು ಆಗಿರುತ್ತದೆ. ಅಧಿದೇವತೆ ಇಂದ್ರ, ಇವನ ಪ್ರೀತ್ಯರ್ಥ ಪರಮೇಶ್ವರನ ಆರಾಧನೆ, ದೂರ್ವಾಹೋಮ, ವಿಪ್ರಪೂಜೆ, ಪಾಪಗ್ರಹರ ರಾಶಿಗಳಲ್ಲಿ ಹರಪೂಜೆ, ಶುಭಗ್ರಹರ ರಾಶಿಗಳಲ್ಲಿ ಹರಿಪೂಜೆ ಮಾಡುತ್ತಾರೆ, ಕಡಲೆದಾನ ಮಾಡುತ್ತಾರೆ.

ಕರ್ಕಟಕ ರಾಶಿಯು ಗುರುವಿನ ಉಚ್ಚಕ್ಷೇತ್ರ, ಈ ರಾಶಿಯ 5ನೇ ಭಾಗವು ಇವನ ಪರಮೋಚ್ಚ, ಧನು ಮತ್ತು ಮೀನರಾಶಿಯು ಇವನ ಸ್ವಕ್ಷೇತ್ರ, ಧನು ರಾಶಿಯ 0 ಭಾಗದಿಂದ 10 ಭಾಗದ ವರೆಗೆ ಇವನ ಮೂಲತ್ರಿಕೋಣ, ಮಕರ ರಾಶಿಯು ಇವನ ನೀಚಕ್ಷೇತ್ರ: ಮಕರರಾಶಿಯ 5ನೇ ಭಾಗವು ಇವನ ಅತಿನೀಚ ಭಾಗ ಆಗಿರುತ್ತದೆ.

6. ಶುಕ್ರ : ಶುಕ್ರನು ಕಾಲಪುರುಷನ ಕಾಮಕಾರಕನು. ಜ್ಞಾನಕಾರಕನು, ಭೋಗಪ್ರಧಾನನು, ಲೌಕಿಕ ಸುಖವನ್ನು ನೀಡುವವನು, ಮತ್ತು ಲೌಕಿಕ ವ್ಯವಹಾರದ ಮಂತ್ರಿ ಆಗಿರುತ್ತಾನೆ. ಇವನು ತಾರಾಗ್ರಹನು, ದ್ವಿಪಾದಗ್ರಹನು, ಮೃದು ಹಾಗೂ ಲಘು ಸ್ವಭಾವದವನು, ಕಳತ್ರಕಾರಕನು. ಮಧ್ಯಮ ಬ್ರಾಹ್ಮಣನು. ರಜೋಗುಣ ಉಳ್ಳವನು, ಆಗಿರುತ್ತಾನೆ. ಇವನನ್ನು ಸಜಲಗ್ರಹ ಎನ್ನುತ್ತಾರೆ. ಉದ್ದವಾದ ಭುಜಗಳು. ಅಗಲವಾದ ಮುಖ. ಕಪ್ಪಾಗಿ ಸುರುಳಿ ಸುರುಳಿಯಾದ ಗುಂಗುರು ಕೂದಲು, ಕಮನೀಯ ಶರೀರ, ಶೋಭನನೇತ್ರ, ಆಕರ್ಷಕ ವ್ಯಕ್ತಿತ್ವ ಮತ್ತು ಬೂದು ಕಪ್ಪುಬಣ್ಣದಿಂದ ಕೂಡಿದವನು, ಕಫ ವಾತ ಪ್ರಕೃತಿಯವನು, ವೀರ್ಯಕಾರಕನು ಆಗಿರುತ್ತಾನೆ. ಶಯನಸ್ಥಾನ ಮತ್ತು ಅಂತಃಪುರ ಇವನ ವಾಸಸ್ಥಾನ, ಗಟ್ಟಿಯಾದ ವಸ್ತ್ರ, ಬಲಿಷ್ಠನಾದಾಗ ಚಿತ್ರ ವಿಚಿತ್ರ ವರ್ಣದ ಪಟ್ಟೆವಸ್ತ್ರ. ಆಮ್ಲರಸ, ಚಿತ್ರವರ್ಣ ಮತ್ತು ಯಜುರ್ವೇದ ಇವನ ಅಧಿಪತ್ಯದಲ್ಲಿ ಇರುತ್ತದೆ. ಶುಕ್ರನು ವೀರ್ಯಾಧಿಕ್ಯ ಉಳ್ಳವನು, ಉನ್ನತ ಪದವಿ, ಧನಕಾರಕನು, ಸಂಪತ್ತು, ವಾಹನ, ವಸ್ತ್ರ, ಭೂಷಣ, ನಿಧಿ, ಸಂಗೀತ, ನಾಟ್ಯ, ಛಾಯಾಚಿತ್ರ ಮೊದಲಾದ ಮನೋರಂಜನ ಇತ್ಯಾದಿ ಶುಕ್ರನು ನೀಡುತ್ತಾನೆ. ಮತಿವಂತನು, ಸುಖವಂತನು, ಕಾಮಿಯು, ಆಗಿರುತ್ತಾನೆ. ಪಂಚಮಹಾ ಭೂತಗಳಲ್ಲಿ ಜಲತತ್ವಕ್ಕೆ ಶುಕ್ರನು ಅಧಿಪತಿಯಾಗಿರುತ್ತಾನೆ. ಇವನ ಧಾತು ಮುತ್ತು ಮತ್ತು ಆಗ್ನೇಯ ದಿಕ್ಕಿನ ಅಧಿಪತಿ ಆಗಿರುತ್ತಾನೆ.

ಶಚಿಯು ಶುಕ್ರನ ಅಧಿದೇವತೆ. ಇವನ ಪ್ರೀತ್ಯರ್ಥ ಶಕ್ತಿ ಆರಾಧನೆ, ಮಹಾಮಾಯಾ, ಚಾಮುಂಡಿ ಇತ್ಯಾದಿ ದೇವತೆಗಳ ಸೇವೆ, ದೇವಿಮಹಾತ್ಮ್ಯ ಪಾರಾಯಣೆ ಮತ್ತು ಅವರೆದಾನ ಮಾಡುತ್ತಾರೆ, ಶುಕ್ರನ ಕಾಲಮಾನವು ಪಕ್ಷ ( 15 ದಿನ ) ಆಗಿರುತ್ತದೆ

ಮೀನರಾಶಿಯು ಶುಕ್ರನ ಉಚ್ಚಕ್ಷೇತ್ರ. ಈ ರಾಶಿಯ 27ನೇ ಭಾಗವು ಇವನ ಪರಮೋಚ್ಚ, ವೃಷಭ ಮತ್ತು ತುಲಾರಾಶಿಗಳು ಇವನ ಸ್ವಕ್ಷೇತ್ರ, ತುಲಾ ರಾಶಿಯ ಶೂನ್ಯಭಾಗದಿಂದ 5 ಭಾಗದ ವರೆಗೆ ಇವನ ಮೂಲತ್ರಿಕೋಣ ಆಗಿರುತ್ತದೆ. ಕನ್ಯಾರಾಶಿಯು ಶುಕ್ರನ ನೀಚಕ್ಷೇತ್ರ ಮತ್ತು ಈ ರಾಶಿಯ 27ನೇ ಭಾಗವು ಶುಕ್ರನ ಅತಿನೀಚ ಭಾಗ ಆಗಿರುತ್ತದೆ.

7. ಶನಿ : ಶನಿಯು ಕಾಲಪುರುಷನ ಸೇವಕನು, ದುಃಖಕಾರಕನು, ಕರ್ಮ ಕಾರಕನು, ಆಯುಷ್ಕಾರಕನು, ನಾಶಕಾರಕನು, ಮೃತ್ಯುಕಾರಕನು ಆಗಿರುತ್ತಾನೆ. ಇವನು ತಾರಾಗ್ರಹನು, ಮಂದಗ್ರಹನು, ಪಕ್ಷಿಗ್ರಹನು, ಪಾಪಗ್ರಹನು. ಪುರುಷ ನಪುಂಸಕನು ಅಂತ್ಯಜನು ಅನುಲೋಮಜ ಅಥವಾ ಪ್ರತಿಲೋಮಜನು. ತಮೋಗುಣದವನು. ತೀಕ್ಷ್ಣ ಸ್ವಭಾವದವನು, ಕೃಶವಾಗಿ ಉದ್ದವಾದ ಶರೀರ, ಒರಟಾದ, ರೋಮ ಮತ್ತು ಕೂದಲು, ಕಪ್ಪುಬಣ್ಣದವನು. ಅಗಲವಾಗಿ ದೊಡ್ಡದಾದ ಹಲ್ಲುಗಳು, ಕಪಿಲವರ್ಣದ ವಿಶಾಲವಾದ ಕಣ್ಣು ಉಳ್ಳವನು, ಆಲಸಿಯು ಆಗಿರುತ್ತಾನೆ. ಪಂಚಮಹಾಭೂತಗಳಲ್ಲಿ ವಾಯುತತ್ವದ ಅಧಿಪತಿ ಮತ್ತು ಪಶ್ಚಿಮ ದಿಕ್ಕನ್ನು ಸೂಚಿಸುತ್ತಾನೆ. ಇವನು ಸ್ನಾಯು ಮತ್ತು ಮಾಂಸ ಖಂಡಗಳ ಅಧಿಪತಿ, ವಾತ ಪ್ರಕೃತಿಯವನು. ಗುಡ್ಡ, ಪರ್ವತ, ಕಸದರಾಶಿ ಇವನ ವಾಸಸ್ಥಾನ ಆಗಿರುತ್ತದೆ. ಹರಿದ ಬಟ್ಟೆ, ಕಪ್ಪುಬಣ್ಣದ ಪಟ್ಟೆವಸ್ತ್ರ, ಶಿಶಿರಋತು, ಕಷಾಯ ರಸ, ಇವನ ಅಧಿಪತ್ಯದಲ್ಲಿ ಇರುತ್ತದೆ. ಇವನಧಾತು ಕಬ್ಬಿಣ. ರತ್ನವು ಸ್ವಚ್ಛನೀಲ ಆಗಿರುತ್ತದೆ.

ಜೀವನೋಪಾಯ, ಮರಣ ಹೇತು, ವಿಪತ್ತು, ಸೇವಕರು ಇತ್ಯಾದಿ ಶನಿ ಯಿಂದ ಚಿಂತಿಸಬೇಕು. ಕಾಲಪುರುಷನ ಕರ್ಮಕಾರಕನಾದ ಶನಿಯು ಕರ್ಮಕ್ಕೆ ತಕ್ಕ ಪ್ರತಿಫಲ ನೀಡುವುದಿಲ್ಲ. ನೈಸರ್ಗಿಕ ಕುಂಡಲಿಯ ಲಾಭಾಧಿಪತಿಯಾದ್ದ ರಿಂದ ಸ್ಥಾವರ ಸಂಪತ್ತನ್ನು ನೀಡುತ್ತಾನೆ. ಮಂದಗತಿಯಿಂದ ಚಲಿಸುವ ಇವನು ಜೀವಿತದ ಉತ್ತರಾರ್ಧದಲ್ಲಿ ಸಂಪತ್ತು ಸ್ಥಾನಮಾನ ಕೀರ್ತಿ ಸುಖಮಯ ವಾತಾ ವರಣದಲ್ಲಿ ಅವಸಾನ ನೀಡುತ್ತಾನೆ.

ಶನಿಯ ಕಾಲಮಾನ ಒಂದು ವರ್ಷ ಮತ್ತು ಅಧಿದೇವತೆ ಬ್ರಹ್ಮನು ಆಗಿರುತ್ತಾನೆ. ಶನಿಯ ಪ್ರೀತ್ಯರ್ಥ ಗಣಹೋಮ, ಅನ್ನದಾನ, ಅಶ್ವತ್ಥ ವೃಕ್ಷಪೂಜೆ, ಎಳ್ಳುದಾನ ಮತ್ತು ಎಳ್ಳೆಣ್ಣೆಯಲ್ಲಿ ಮುಖನೋಡಿ ದೇವಾಲಯ ದಲ್ಲಿ ದೀಪ ಉರಿಸುತ್ತಾರೆ.

ತುಲಾರಾಶಿಯು ಶನಿಯ ಉಚ್ಚಕ್ಷೇತ್ರ ಈ ರಾಶಿಯ 20ನೇ ಭಾಗವು ಇವನ ಪರಮೋಚ್ಚ, ಮಕರ ಮತ್ತು ಕುಂಭರಾಶಿಯು ಇವನ ಸ್ವಕ್ಷೇತ್ರಗಳು, ಕುಂಭರಾಶಿಯ 20ನೇ ಭಾಗದ ವರೆಗೆ ಇವನ ಮೂಲತ್ರಿಕೋಣ. ಮೇಷರಾಶಿಯು ಇವನ ನೀಚಕ್ಷೇತ್ರ ಮೇಷರಾಶಿಯ 20ನೇ ಭಾಗವು ಇವನ ಅತಿನೀಚ ಭಾಗ ಆಗಿರುತ್ತದೆ.

**8. ರಾಹು :** ರಾಹುವನ್ನು ಛಾಯಾಗ್ರಹನೆಂದು ಕರೆಯುತ್ತಾರೆ. ಇವನು ಸರಿಸೃಪಗ್ರಹನು ನೀಲವರ್ಣದವನು. ದೀರ್ಘವಾದ ಶರೀರ, ವಾತಪ್ರಕೃತಿ ಹೊಗೆಯಂತೆ ನೀಲವರ್ಣದವನು, ತಾಮಸಗುಣ, ಬುದ್ಧಿವಂತನು, ಭಯಂಕರನು, ದಕ್ಷಿಣ ದಿಕ್ಕಿನಲ್ಲಿ ಮುಖ ಮಾಡಿರುವವನು ಆಗಿರುತ್ತಾನೆ. ಇವನು ನಿಧಿ ಅಥವಾ ಭೂಗತಧನವನ್ನು ನೀಡುತ್ತಾನೆ. ಇವನು ಸ್ತ್ರೀಗ್ರಹನು, ಪಾಪಗ್ರಹನು, ವೃದ್ಧಾವಸ್ಥೆಯಲ್ಲಿ ಇರುವವನು, ಕಾಲುಗಳು ಇಲ್ಲದವನು, ಅಧೋಮುಖದೃಷ್ಟಿ ಉಳ್ಳ ಭಯಾನಕ ಗ್ರಹನು ಆಗಿರುತ್ತಾನೆ. ಇವನ ಆಯುಸ್ಸು ನೂರು ವರ್ಷ, ವಾಸಸ್ಥಾನ ಕಾಡು ವನ, ಕತ್ತಲೆಯ ಪ್ರದೇಶ. ಪರ್ವತ ಶಿಖರ, ವಲ್ಮಿಕಾದಿ ಹುತ್ತ ಆಗಿರುತ್ತದೆ. ಇವನ ಧಾತು ಸೀಸ, ಅಸ್ಥಿ, ರಸ-ಕಷಾಯ, ತೀಕ್ಷ್ಣ, ಚಿತ್ರವರ್ಣದ ಹಳೇ ವಸ್ತ್ರ, ಜಾತಿ-ನಿಷಾದ, ರತ್ನ-ಗೋಮೇಧಿಕ, ಸನ್ಮೋಹಿನಿ ವಿದ್ಯೆ, ಮತ್ತು ಮುಳ್ಳಿನ ವೃಕ್ಷಗಳು, ಇವನ ಅಧೀನ ಇದೆ.

ಇವನು ಚರ್ಮವ್ಯಾಧಿ, ಕುಷ್ಠರೋಗ, ವಿಷಮಜ್ವರ, ಮತ್ತು ಕರ್ಮಜ ವ್ಯಾಧಿಗಳನ್ನು, ದುಃಖವನ್ನು ನೀಡುವವನು ಆಗಿರುತ್ತಾನೆ. ಅಸತ್ಯವನ್ನು ಸಾಧಿಸುವವರು, ವೈದಿಕ ಧರ್ಮದ ವಿರುದ್ಧ ಆಚರಣೆ ಉಳ್ಳವರು, ಮೋಸಗಾರ, ಕಪಟಉಳ್ಳವರು, ಬುದ್ಧಿಹೀನರು ಮತ್ತು ಪರರನ್ನು ನಿಂದಿಸುವವರು, ಜೂಜಾಡುವವರು ಮತ್ತು ಚಂಡಾಲಾದಿ ಹೀನ ಜಾತಿಯವರನ್ನು ಇವನು ಸೂಚಿಸುತ್ತಾನೆ. ಇವನು ನೈಋತ್ಯದಿಕ್ಕಿನ ಅಧಿಪತಿ, ತಾಯಿತಂದೆ ಮತ್ತು ತಾಯಿಯ ಸಂಬಂಧಿಕರನ್ನು ಇವನು ಸೂಚಿಸುತ್ತಾನೆ.

ರಾಜರಿಂದ, ಕಳ್ಳರಿಂದ, ವಿಷ, ಅಗ್ನಿ ಮತ್ತು ಶಸ್ತ್ರದಿಂದ ಹಾನಿ ಅಥವಾ ಭಯ ನೀಡುತ್ತಾನೆ. ಮಕ್ಕಳಿಗೆ ಅನಾರೋಗ್ಯ, ಚಿತ್ತಭ್ರಮೆ, ಬಂಧುನಾಶ, ನೀಚರಿಂದ ಅವಮಾನ, ಆಲೋಚಿಸದೆ ಕಾರ್ಯ ಮಾಡುವುದರಿಂದ ಅಪವಾದ, ಸ್ಥಾನಚ್ಯುತಿ, ಕಾಲುನೋವು, ಕೈಕೊಂಡ ಕಾರ್ಯಗಳಲ್ಲಿ ಹಾನಿ, ಪರಸ್ತ್ರೀ ಸಹವಾಸ, ಇಷ್ಟಜನರ ವಿಯೋಗ, ಮತ್ತು ಮಾನಸಿಕ ಅಶಾಂತಿಯನ್ನು ರಾಹುವು ತನ್ನ ದಶಾಕಾಲದಲ್ಲಿ ನೀಡುತ್ತಾನೆ.

ಇವನ ಕಾಲಮಾನ 8 ತಿಂಗಳು ಆಗಿರುತ್ತದೆ. ಆದಿಶೇಷನು ಇವನ ಅಧಿದೇವತೆ ಮತ್ತು ಇವನ ಪ್ರೀತ್ಯರ್ಥ ನಾಗಪೂಜೆ, ದುರ್ಗೆಯ ಮತ್ತು ಸುಬ್ರಮಣ್ಯನ ಆರಾಧನೆ, ಮತ್ತು ಉದ್ದು ದಾನಮಾಡುತ್ತಾರೆ.

ಮಿಥುನರಾಶಿಯು ರಾಹುವಿನ ಉಚ್ಚಕ್ಷೇತ್ರ ಧನುರಾಶಿಯು ನೀಚಕ್ಷೇತ್ರ, ಕನ್ಯಾರಾಶಿ ಸ್ವಕ್ಷೇತ್ರ ಮತ್ತು ಕುಂಭರಾಶಿ ಮೂಲತ್ರಿಕೋಣ ಆಗಿರುತ್ತದೆ,

9. ಕೇತು : ಕೇತುವನ್ನು ಛಾಯಾಗ್ರಹನೆಂದು ಕರೆಯುತ್ತಾರೆ. ಇವನು ಜ್ಞಾನಕಾರಕನು, ಮೋಕ್ಷಕಾರಕನು, ಗೂಢ ಪರಿಣೀತನು, ವೇದಾಂತಿ, ಮಂತ್ರ ಶಾಸ್ತ್ರ ಬಲ್ಲವನು. ರಹಸ್ಯವನ್ನು ಬಲ್ಲವನು ಆಗಿರುತ್ತಾನೆ. ಇವನು ಕೃಶ ಮತ್ತು ದೀರ್ಘ ಶರೀರ ಉಳ್ಳವನು, ಧೂಮಮಯನು, ವ್ರಣಾಂಕಿತ ಪಾದಗಳು ವಿಷ ಮಯ ನಾಲಗೆ ಉಗ್ರದೃಷ್ಟಿ ಮತ್ತು ವಾಣಿ, ರಕ್ತವರ್ಣ ಉಳ್ಳವನು ಆಗಿರುತ್ತಾನೆ. ಇವನು ನಪುಂಸಕಗ್ರಹನು, ಕ್ರೂರಗ್ರಹನು, ಶಸ್ತ್ರಸಜ್ಜಿತನು ಆಗಿರುತ್ತಾನೆ. ಪತಿತರು, ದುರಭಿಪ್ರಾಯ ಉಳ್ಳವರು, ದುಷ್ಟಶಕ್ತಿ ಅಥವಾ ಪಿಶಾಚಿ ಪೀಡಿತರು, ಜಾತಿ ಇಲ್ಲದವರು, ಅಂತರ್ಜಾತಿಯವರು ಅಥವಾ ವಿಜಾತಿಯ ಜನರನ್ನು ಇವನು ಸೂಚಿಸುತ್ತಾನೆ. ಇವನ ವಾಸಸ್ಥಾನ ಬಿಲ, ಕತ್ತಲೆಯ ಪ್ರದೇಶ ಆಗಿರುತ್ತದೆ. ಮಣ್ಣಿನ ಪಾತ್ರೆ ಛಿದ್ರವಾದ ಚಿತ್ರವರ್ಣದ ವಸ್ತ್ರ, ನೀಲಮಣಿ, ಚಿಕ್ಕ ವೃಕ್ಷಗಳು, ವೈಢೂರ್ಯ ಇವನ ಅಧೀನದಲ್ಲಿ ಇರುತ್ತದೆ ಅಜ್ಜ ಮತ್ತು ತಂದೆಯ ಸಂಭಂಧಿಕರನ್ನು ಸೂಚಿಸುತ್ತಾನೆ.

ಕೇತುವಿನ ಅಧಿದೇವತೆ ಬ್ರಹ್ಮ ಮತ್ತು ಕಾಲಮಾನ ಮೂರು ತಿಂಗಳು ಆಗಿರುತ್ತದೆ. ಇವನ ಪ್ರೀತ್ಯರ್ಥ ತಪಶ್ಚರ್ಯ, ಗಂಗಾಸ್ನಾನ, ಶಿವ, ವಿಷ್ಣು ಮತ್ತು ಗಣಪತಿಯ ಉಪಾಸನೆ ಮತ್ತು ಹುರುಳಿದಾನ ಮಾಡುತ್ತಾರೆ.

ಧನುರಾಶಿ ಕೇತುವಿನ ಉಚ್ಚಕ್ಷೇತ್ರ ಮೀನರಾಶಿಯು ಸ್ವಕ್ಷೇತ್ರ, ಸಿಂಹ ರಾಶಿ ಮೂಲತ್ರಿಕೋಣ ಮತ್ತು ಮಿಥುನರಾಶಿಯು ಇವನ ನೀಚಕ್ಷೇತ್ರ ಆಗಿರುತ್ತದೆ.

ಜನನ ಜಾತಕದಲ್ಲಿ ಶುಭಗ್ರಹರ, ಪ್ರಭಾವದಿಂದ ಜಾತಕನು ಸತ್ಕರ್ಮ, ಸದಾಚಾರ ಪ್ರವೃತ್ತಿ ಉಳ್ಳವನು, ಸತ್ವಗುಣಗಳಿಂದ ಕೂಡಿದವನು, ಶುಚಿರ್ಭೂತನು, ಸುಂದರವಾದ ಆಕರ್ಷಕ ವ್ಯಕ್ತಿತ್ವ ಉಳ್ಳವನು, ತೇಜಸ್ವಿಯು, ಜಪ ದಾನ, ಹೋಮ ಇತ್ಯಾದಿ ದೇವತಾ ಕಾರ್ಯಗಳಲ್ಲಿ ನಿರತನು, ದೇವ ಬ್ರಾಹ್ಮಣ ರಲ್ಲಿ ನಿಷ್ಠೆ ಉಳ್ಳವನು, ಧನವಂತನು ಕೀರ್ತಿವಂತನು ಸುಖವಂತನು ಆಗುತ್ತಾನೆ.

ಜನನ ಜಾತಕದಲ್ಲಿ ಪಾಪಗ್ರಹರ ಪ್ರಭಾವದಿಂದ ಜಾತಕನು, ಕ್ರೂರ ಸ್ವಭಾವದವನು, ಲೋಭಿಯು, ದುಷ್ಕರ್ಮಗಳಲ್ಲಿ ನಿರತನು, ಸ್ವಕಾರ್ಯಗಳಲ್ಲಿ ಆಲಸಿಯು, ಕಲಹಪ್ರಿಯನು, ಸಾಧುಸಜ್ಜನರನ್ನು ದ್ವೇಷಿಸುವವನು, ತಮೋ ಗುಣಗಳಿಂದ ಕೂಡಿದವನು, ಪರರನ್ನು ಹಿಂಸಿಸುವವನು ಕೃತಘ್ನನು, ವಂಚಕನು ಆಗುತ್ತಾನೆ.

# ೯. ಗ್ರಹರ ಬಲಾದಿಗಳು

ರವಿ: ರವಿಯು ತನ್ನ ಉಚ್ಚರಾಶಿ, ಸ್ವಕ್ಷೇತ್ರ, ಸ್ವದ್ರೇಕ್ಕಾಣ, ಸೂರ್ಯ ಹೋರೆ, ರವಿವಾರ, ಸ್ವನವಾಂಶ, ಉತ್ತರಾಯಣ, ಮಧ್ಯಾಹ್ನಕಾಲ, ರಾಶಿ ಪ್ರವೇಶ ಕಾಲ, ಮಿತ್ರನವಾಂಶ ಮತ್ತು ದಶಮ ಭಾವದಲ್ಲಿ ಬಲಿಷ್ಠನು ಆಗಿರುತ್ತಾನೆ.

ಚಂದ್ರ : ಚಂದ್ರನು ತನ್ನ ಉಚ್ಚರಾಶಿ, ಸ್ವಕ್ಷೇತ್ರ, ಸ್ವದ್ರೇಕ್ಕಾಣ, ಚಂದ್ರಹೋರೆ, ಚಂದ್ರವಾರ, ಸ್ವನವಾಂಶ, ಋಕ್ಷಸಂಧಿಯ ಹೊರತು ರಾಶಿಯ ಅಾತ್ಮಭಾಗದಲ್ಲಿ, ಶುಭಗ್ರಹರಿಂದ ನೋಡಲ್ಪಟ್ಟಾಗ, ರಾತ್ರಿಕಾಲದಲ್ಲಿ, ಚತುರ್ಥ ಭಾವದಲ್ಲಿ, ದಕ್ಷಿಣಾಯನದಲ್ಲಿ, ಬಲಿಷ್ಠನು ಆಗಿರುತ್ತಾನೆ. ಬಲಿಷ್ಠನಾದ ಚಂದ್ರನು ಸಕಲಗ್ರಹರಿಂದ ನೋಡಲ್ಪಟ್ಟರೆ ರಾಜಯೋಗ ಆಗುತ್ತದೆ.

ಕುಜ : ಕುಜನು ಮಂಗಳವಾರ, ಸ್ವನವಾಂಶ, ಸ್ವದ್ರೇಕ್ಕಾಣ, ಸ್ವತ್ರಿಂಶಾಂಶ, ಸ್ವಕ್ಷೇತ್ರಗಳಾದ ಮೇಷ ಮತ್ತು ವೃಶ್ಚಿಕರಾಶಿ ಉಚ್ಚಕ್ಷೇತ್ರವಾದ ಮಕರ ಮತ್ತು ಕುಂಭರಾಶಿ, ರಾತ್ರಿಕಾಲದಲ್ಲಿ, ಕೃಷ್ಣಪಕ್ಷದಲ್ಲಿ, ವಕ್ರಗತಿಯಲ್ಲಿ ಇರುವಾಗ, ದಕ್ಷಿಣದಿಕ್ಕಿನಲ್ಲಿ, ದಶಮಭಾವದಲ್ಲಿ ರಾಶಿಯ ಆದಿಭಾಗದಲ್ಲಿ ಬಲಿಷ್ಠನು ಆಗಿರುತ್ತಾನೆ. ಮೀನ ಮತ್ತು ಕರ್ಕಟಕ ರಾಶಿಯ ಕುಜನು ಸುಖವನ್ನು ಹೆಚ್ಚಾಗಿ ಕೊಡುತ್ತಾನೆ.

ಬುಧ : ಬುಧನು ಕನ್ಯಾ ಮತ್ತು ಮಿಥುನರಾಶಿಯಲ್ಲಿ, ಬುಧವಾರ, ತನ್ನ ಸ್ವವರ್ಗಗಳಲ್ಲಿ, (ದ್ರೇಕ್ಕಾಣ, ನವಾಂಶ, ತ್ರಿಂಶಾಂಶ) ಧನುರಾಶಿಯಲ್ಲಿ, ರವಿಯ ಯುತಿಯಲ್ಲಿ ಇಲ್ಲದಿರುವಾಗ, ದಿವಾ-ರಾತ್ರಿಕಾಲದಲ್ಲಿ, ಉತ್ತರದಿಕ್ಕಿನಲ್ಲಿ, ರಾಶಿಯ ಮಧ್ಯಭಾಗದಲ್ಲಿ, ಬಲಿಷ್ಠನು ಆಗಿರುತ್ತಾನೆ. ಲಗ್ನದ ಬುಧನು ಯಶಸ್ಸು, ಬಲ ಮತ್ತು ಅಭಿವೃದ್ಧಿಯನ್ನು ಸದಾಕಾಲ ನೀಡುತ್ತಾನೆ.

ಗುರು : ಗುರುವು ಮೀನ, ವೃಶ್ಚಿಕ, ಧನುಸ್ಸು ಮತ್ತು ಕರ್ಕಟಕದಲ್ಲಿ, ತನ್ನ ಸ್ವವರ್ಗಗಳಲ್ಲಿ(ದ್ರೇಕ್ಕಾಣ, ನವಾಂಶ, ತ್ರಿಂಶಾಂಶ), ಗುರುವಾರ, ರಾಶಿಯ ಮಧ್ಯಭಾಗದಲ್ಲಿ, ಮಧ್ಯಾಹ್ನ, ಉತ್ತರದಿಕ್ಕಿನಲ್ಲಿ, ಕುಂಭ ಮತ್ತು ಮಕರರಾಶಿಯಲ್ಲಿ ಬಲಿಷ್ಠನು ಆಗಿರುತ್ತಾನೆ. ಲಗ್ನ, ಚತುರ್ಥ ಮತ್ತು ದಶಮ ಭಾವದ ಗುರುವು ಧನ ಸಂಪತ್ತನ್ನು ನೀಡುತ್ತಾನೆ.

ಶುಕ್ರ : ಶುಕ್ರನು ತನ್ನ ಉಚ್ಚ ರಾಶಿಯಲ್ಲಿ, ಸ್ವವರ್ಗಗಳಲ್ಲಿ, (ದ್ರೇಕ್ಕಾಣ, ನವಾಂಶ, ತ್ರಿಂಶಾಂಶ) ಶುಕ್ರವಾರ, ರಾಶಿಯ ಮಧ್ಯಭಾಗದಲ್ಲಿ, ಷಷ್ಠ, ದ್ವಾದಶ, ತೃತೀಯ ಮತ್ತು ಚತುರ್ಥಭಾವದಲ್ಲಿ, ಅಪರಾಹ್ನಕಾಲದಲ್ಲಿ ಗ್ರಹಯುದ್ಧದಲ್ಲಿ ಇರುವಾಗ, ಚಂದ್ರನಯುತಿಯಲ್ಲಿ ಇರುವಾಗ, ವಕ್ರಗತಿಯಲ್ಲಿ ಇರುವಾಗ, ಪೂರ್ವೋದಿತನಾದಾಗ, ಶುಭಫಲದಾಯಕನು ಆಗಿರುತ್ತಾನೆ.

ಶನಿ : ಶನಿಯು ತುಲಾ, ಮಕರ, ಕುಂಭರಾಶಿಯಲ್ಲಿ ಇರುವಾಗ, ಸಪ್ತಮ ಭಾವದಲ್ಲಿ, ದಕ್ಷಿಣದಿಕ್ಕಿನಲ್ಲಿ, ಸ್ವದ್ರೇಕ್ಕಾಣ, ಶನಿವಾರ, ತನ್ನ ದಶಾಕಾಲದಲ್ಲಿ, ರಾಶಿಯ ಅಂತ್ಯಭಾಗದಲ್ಲಿ, ಗ್ರಹಯುದ್ಧದಲ್ಲಿ ಇರುವಾಗ, ಕೃಷ್ಣಪಕ್ಷದಲ್ಲಿ, ವಕ್ರನಾದಾಗ ಸಕಲರಾಶಿಗಳಲ್ಲಿ ಬಲಿಷ್ಠನು ಆಗಿರುತ್ತಾನೆ. ತುಲಾಲಗ್ನ, ಧನುರ್ಲಗ್ನ ಮತ್ತು ಮೀನಲಗ್ನದ ಶನಿಯು ರಾಜಯೋಗಕಾರಕನು ಆಗಿರುತ್ತಾನೆ.

ರಾಹು : ರಾಹುವು ಮೇಷ, ವೃಶ್ಚಿಕ, ಕುಂಭ, ಕನ್ಯಾ, ವೃಷಭ ಮತ್ತು ಕರ್ಕಟಕರಾಶಿಯಲ್ಲಿ ಇರುವಾಗ, ಸಂಧ್ಯಾಕಾಲದಲ್ಲಿ ಮತ್ತು ದಶಮಭಾವದಲ್ಲಿ ಬಲಿಷ್ಠನಾಗಿರುತ್ತಾನೆ. ರಾಹುವಿನ ದೋಷವನ್ನು ಬುಧನು ನಿವಾರಿಸುತ್ತಾನೆ.

ಕೇತು : ಕೇತುವು ಕನ್ಯಾರಾಶಿಯ ಅಂತ್ಯಭಾಗದಲ್ಲಿ, ವೃಷಭ ಮತ್ತು ಧನುರಾಶಿಯಲ್ಲಿ ಇರುವಾಗ, ರಾತ್ರಿಕಾಲದಲ್ಲಿ ಮತ್ತು ಜನನ ಕಾಲದಲ್ಲಿ ಉಲ್ಕಾಪಾತ, ಧೂಮಕೇತು, ಇತ್ಯಾದಿ ಕಂಡುಬಂದರೆ, ಕೇತುವು ಬಲಿಷ್ಠನಾಗಿರುತ್ತಾನೆ.

## ೧೦. ಗ್ರಹರಿಂದ ರೋಗ ವಿಚಾರ

ರವಿಯು ದೂಷಿತನಾದಾಗ ತಲೆನೋವು, ಶಿರಸ್ಸಿನ ವ್ಯಾಧಿಗಳು, ಜ್ವರ, ದೀಪ್ತಾಗ್ನಿ, ಕ್ಷಯರೋಗ, ಅತಿಸಾರ, ಮಾನಸಿಕವ್ಯಥೆ ಇತ್ಯಾದಿ ನೀಡುತ್ತಾನೆ. ರಾಜರಿಂದ, ದೇವಬ್ರಾಹ್ಮಣ ಹೇತುವಿನಿಂದ ಮತ್ತು ಭೃತ್ಯರು ಅಥವಾ ಕೈಕೆಳಗಿನವರಿಂದ ಪೀಡೆ ಅಥವಾ ಹಾನಿ ಸಂಭವಿಸುತ್ತದೆ.

ಚಂದ್ರನು ದೂಷಿತನಾದಾಗ ಪಾಂಡುರೋಗ, ಜಲದೋಷ, ಪಿತ್ತಕಾಮಾಲೆ, ಶೀತವಿಕಾರ, ಮೂಗಿನ ವ್ಯಾಧಿಗಳು, ಕಫ-ವಾತ ವಿಕಾರಗಳು, ಸ್ತ್ರೀ ಹೇತುವಿನಿಂದ ವ್ಯಾಕುಲತೆ ಇತ್ಯಾದಿ ನೀಡುತ್ತಾನೆ.

ಕುಜನು ದೂಷಿತನಾದಾಗ ಬಾವು, ವೃಷಣ ಬಾತುಹೋಗುವುದು, ಕಫ ವಿಕಾರ, ಶಸ್ತ್ರಹೇತುವಿನಿಂದ, ಅಗ್ನಿಯಿಂದ, ಮಾಂಸವೃದ್ಧಿ, ಗ್ರಂಥಿರೋಗ, ಬಾಯಾರಿಕೆ, ವ್ರಣ, ದಾರಿದ್ರ್ಯ ಇತ್ಯಾದಿ ನೀಡುತ್ತಾನೆ.

ಬುಧನು ದೂಷಿತನಾದಾಗ ಗುಪ್ತಾಂಗಗಳಲ್ಲಿ, ಉದರದಲ್ಲಿ, ವಾತಜನಿತ ವ್ಯಾಧಿಗಳನ್ನು, ಕುಷ್ಠ ಮೊದಲಾದ ಚರ್ಮವ್ಯಾಧಿಗಳನ್ನು, ಅಜೀರ್ಣ, ಮಂದಾಗ್ನಿ, ವೇದನೆ, ಗ್ರಹಣೀರೋಗ ಇತ್ಯಾದಿ ನೀಡುತ್ತಾನೆ.

ಗುರುವು ದೂಷಿತನಾದಾಗ ದೇವಬ್ರಾಹ್ಮಣ ಶಾಪಜನಿತ ವ್ಯಾಧಿ, ಪಿತ್ತ ಜನಕಾಂಗವ್ಯಾಧಿ ಮತ್ತು ಗುಲ್ಮರೋಗ ನೀಡುತ್ತಾನೆ.

ಶುಕ್ರನು ದೂಷಿತನಾದಾಗ ಕುಡಿತ, ಸಿಹಿಮೂತ್ರರೋಗ, ಸ್ತ್ರೀಜನಿತ ವ್ಯಾಧಿ, ವೀರ್ಯನಾಶ ಇತ್ಯಾದಿ ನೀಡುತ್ತಾನೆ.

ಶನಿಯು ದೂಷಿತನಾದಾಗ ದಾರಿದ್ರ್ಯ, ಸಂಘದೋಷ, ಪಿಶಾಚಪೀಡೆ, ಚೋರರಿಂದ, ದುಃಖ-ಸಂತಾಪ ಜನಿತವ್ಯಾಧಿಗಳು, ನರದೌರ್ಬಲ್ಯ ಮತ್ತು ಗಂಟು ಅಥವಾ ಸಂದುಗಳಲ್ಲಿ ವೇದನೆಯನ್ನು ನೀಡುತ್ತಾನೆ.

ರಾಹುವು ದೂಷಿತನಾದಾಗ ಮಾರ್ಹರ್ಥಾರೋಗ, ಭಯ, ಸಿಡುಬುರೋಗ, ಕರ್ಮಜವ್ಯಾಧಿ, ಕ್ರಿಮಿಗಳಿಂದ ಜನಿತವ್ಯಾಧಿ, ಪ್ರೇತಪಿಶಾಚಬಾಧೆ, ಬಂಧನ, ಅರುಚಿ, ಕುಷ್ಠರೋಗ, ಸಂಧು-ಗಂಟುಗಳಲ್ಲಿ ರೋಗ, ಅಸ್ಥಿಭಂಗ, ಆತ್ಮಹತ್ಯೆ ಇತ್ಯಾದಿ ನೀಡುತ್ತಾನೆ.

ಕೇತುವು ದೂಷಿತನಾದಾಗ, ಜ್ವರ, ತುರಿಸುವಿಕೆ ಸಿಡುಬು, ವ್ರಣ, ಶತ್ರುಗಳಿಂದ ಆಘಾತ ಕೃತ್ರಿಮಜನಿತ ವ್ಯಾಧಿ, ಹೃದಯವಿಕಾರಗಳು, ಉದರ ಮತ್ತು ಕಣ್ಣಿನರೋಗಗಳು, ಮಾನಸಿಕಪೀಡೆ, ಬುದ್ಧಿಭ್ರಂಶ, ನೀಚಜನರಿಂದ ಮತ್ತು ಕ್ಷುದ್ರಜಂತುಗಳಿಂದ ಹಾನಿ, ವಿಷಬಾಧೆ, ಪಿಶಾಚಪೀಡೆ ಇತ್ಯಾದಿ ನೀಡುತ್ತಾನೆ. ಕೇತುವು ರೋಗಕಾರಕನಾದಾಗ ಗುಣಪಡಿಸಲು ಕಷ್ಟಸಾಧ್ಯವ್ಯಾಧಿಗಳನ್ನು ಅಥವಾ ವೈದ್ಯರು ರೋಗ ನಿಧಾನವನ್ನು ತಪ್ಪಾಗಿ ತಿಳಿದು ವಿರುದ್ಧ ಚಿಕಿತ್ಸೆ ಮಾಡುವ ಸಂಭವ ಇರುತ್ತದೆ.

# ೧೧. ಗ್ರಹದೃಷ್ಟಿ

1. ಸಕಲಗ್ರಹರು ಸ್ವಸ್ಥಾನದಿಂದ (ತಾನು ಇರುವಲ್ಲಿಂದ) ಸಪ್ತಮಸ್ಥಾನವನ್ನು ಪೂರ್ಣದೃಷ್ಟಿಯಿಂದ ನೋಡುತ್ತಾರೆ 2. ತೃತೀಯ ಮತ್ತು ದಶಮವನ್ನು ಕಾಲುದೃಷ್ಟಿಯಿಂದ, 3. ಪಂಚಮ ಮತ್ತು ನವಮವನ್ನು ಅರ್ಧದೃಷ್ಟಿಯಿಂದ. 4 ಚತುರ್ಥ ಮತ್ತು ದಶಮವನ್ನು ಮುಕ್ಕಾಲುದೃಷ್ಟಿಯಿಂದ ನೋಡುತ್ತಾರೆ. ಶನಿ, ಗುರು ಮತ್ತು ಕುಜನಿಗೆ ವಿಶೇಷ ದೃಷ್ಟಿ ಇದೆ. 5. ಶನಿಯು ತಾನಿರುವ ಸ್ಥಾನದಿಂದ ತೃತೀಯ ಮತ್ತು ದಶಮವನ್ನು ಪೂರ್ಣದೃಷ್ಟಿಯಿಂದ ನೋಡುತ್ತಾನೆ. 6. ಗುರುವು ತಾನಿರುವ ಸ್ಥಾನದಿಂದ ಪಂಚಮ ಮತ್ತು ನವಮವನ್ನು ಪೂರ್ಣದೃಷ್ಟಿಯಿಂದ ನೋಡುತ್ತಾನೆ. 7. ಕುಜನು ತಾನಿರುವ ಸ್ಥಾನದಿಂದ ಚತುರ್ಥ ಮತ್ತು ಅಷ್ಟಮವನ್ನು ಪೂರ್ಣದೃಷ್ಟಿಯಿಂದ ನೋಡುತ್ತಾನೆ. 8. ಗ್ರಹರಿಗೆ ತಾವಿರುವ ಸ್ಥಾನದಿಂದ ದ್ವಿತೀಯ, ಷಷ್ಠ, ಏಕಾದಶ ಮತ್ತು ದ್ವಾದಶ ಭಾವದಲ್ಲಿ ದೃಷ್ಟಿ ಇಲ್ಲ. 9. ಶುಭಗ್ರಹರ ದೃಷ್ಟಿಯು ಉತ್ತಮ ಮತ್ತು ಶುಭಫಲವನ್ನು ನೀಡುತ್ತದೆ. 10. ಪಾಪಗ್ರಹರ ದೃಷ್ಟಿಯು ಅಶುಭ ಫಲಗಳನ್ನು ನೀಡುತ್ತದೆ. 11. ಗುರುವಿನ ತ್ರಿಕೋಣ ದೃಷ್ಟಿಯು ಸದಾ ಶುಭಫಲವನ್ನು ನೀಡುತ್ತದೆ. ಹಾಗೂ ಅಶುಭಫಲಗಳ ನಾಶ ಮಾಡುತ್ತದೆ. ಗ್ರಹರ ದೃಷ್ಟಿಯನ್ನು ತ್ರೈರಾಶಿಕ ಕ್ರಮದಿಂದ ಸೂಕ್ಷ್ಮವಾಗಿ ಗಣಿತರೀತ್ಯಾ ಕಂಡುಹಿಡಿಯುವ ವಿಧಾನವನ್ನು ಶ್ರೀಪತಿ ಪದ್ಧತಿ ಎಂಬ ಗ್ರಂಥದಲ್ಲಿ ವಿವರಿಸಿ ಬರೆದಿರುತ್ತದೆ.

# ೧೨. ದೃಷ್ಟಿಫಲ

(1) ಚಂದ್ರನ ಮೇಲೆ ಕುಜನ ದೃಷ್ಟಿಯು ಸಾಮಾನ್ಯವಾಗಿ ಅಶುಭಫಲವನ್ನು ನೀಡುತ್ತದೆ. ಆದರೆ ಮೇಷ, ಮಿಥುನ, ಕರ್ಕಟಕ, ಸಿಂಹ ವೃಶ್ಚಿಕ ಮತ್ತು ಮಕರರಾಶಿಸ್ಥಿತ ಚಂದ್ರನ ಮೇಲೆ ಕುಜದೃಷ್ಟಿಯು ಉತ್ತಮ ಫಲವನ್ನು ನೀಡುತ್ತದೆ.

(2) ಚಂದ್ರನ ಮೇಲೆ ಬುಧದೃಷ್ಟಿಯು ಸದಾ ಒಳ್ಳೇದು, ಆದರೆ ವೃಷಭದಲ್ಲಿದ್ದ ಚಂದ್ರನ ಮೇಲೆ ಬುಧದೃಷ್ಟಿ ಅಶುಭ ಆಗಿರುತ್ತದೆ.

(3) ಚಂದ್ರನಮೇಲೆ ಗುರುದೃಷ್ಟಿ ಸರ್ವತ್ರ ಶುಭಫಲದಾಯಕವಾಗಿರುತ್ತದೆ

(4) ಚಂದ್ರನ ಮೇಲೆ ಶುಕ್ರದೃಷ್ಟಿಯು ಸರ್ವತ್ರ ಒಳ್ಳೇದು ಆದರೆ ಕುಂಭರಾಶಿಸ್ಥಿತ ಚಂದ್ರನ ಮೇಲೆ ಶುಕ್ರನ ದೃಷ್ಟಿಯು ಅಶುಭ ಆಗಿರುತ್ತದೆ.

(5) ಚಂದ್ರನ ಮೇಲೆ ರವಿದೃಷ್ಟಿಯು ಸರ್ವತ್ರ ಅಶುಭ ಆಗಿರುತ್ತದೆ. ಆದರೆ ಸಿಂಹರಾಶಿಸ್ಥಿತ ಚಂದ್ರನ ಮೇಲೆ ರವಿದೃಷ್ಟಿಯು ಶುಭಫಲದಾಯಕ ಆಗಿರುತ್ತದೆ. ರವಿ ಮತ್ತು ಚಂದ್ರರ ಪರಸ್ಪರ ದೃಷ್ಟಿಯು ಹುಣ್ಣಿಮೆದಿನ ಸಂಭವಿಸುತ್ತದೆ.

(6) ಚಂದ್ರನಮೇಲೆ ಶನಿದೃಷ್ಟಿಯು ಅಶುಭಫಲದಾಯಕ ಆಗಿರುತ್ತದೆ. ಆದರೆ ವೃಷಭ ಮತ್ತು ಮಕರರಾಶಿಸ್ಥಿತ ಚಂದ್ರನ ಮೇಲೆ ಶನಿದೃಷ್ಟಿಯು ಶುಭ ಫಲದಾಯಕ ಆಗಿರುತ್ತದೆ.

(7) ಚಂದ್ರಸ್ಥಿತ ಹೋರಾಧಿಪತಿಯು ಹೋರೆಯಲ್ಲಿ ಸ್ಥಿತಗ್ರಹರು ಚಂದ್ರನನ್ನು ನೋಡಿದರೆ ಶುಭಫಲವನ್ನು ನೀಡುತ್ತಾರೆ.

(8) ಚಂದ್ರನು ಸ್ಥಿತದ್ರೇಕ್ಕಾಣಾಧಿಪತಿಯು ಮಿತ್ರಕ್ಷೇತ್ರಗತನಾಗಿ ಚಂದ್ರನನ್ನು ನೋಡಿದರೆ ಉತ್ತಮಫಲವನ್ನು ನೀಡುತ್ತಾನೆ.

(8) ದಿವಾ ಜನನಕ್ಕೆ ಮಿತ್ರನವಾಂಶಸ್ಥಿತ ಚಂದ್ರನನ್ನು ಗುರುವು ನೋಡಬೇಕು, ರಾತ್ರಿ ಜನನಕ್ಕೆ ಮಿತ್ರನವಾಂಶಸ್ಥಿತ ಚಂದ್ರನನ್ನು ಶುಕ್ರನು ನೋಡಬೇಕು. ಈ ಯೋಗದಲ್ಲಿ ಜನಿಸಿದವರು ಧನ-ಸಂಪತ್ತನ್ನು ಗಳಿಸುತ್ತಾರೆ ಮತ್ತು ಸುಖವಂತರು ಆಗುತ್ತಾರೆ.

(10) ವರ್ಗೋತ್ತಮ ನವಾಂಶದಲ್ಲಿ ಶುಭಫಲವು ಪುಷ್ಟಆಗುತ್ತದೆ. ಅಶುಭ ಫಲವು ಲಘು ಆಗುತ್ತದೆ. ಸ್ವನವಾಂಶದಲ್ಲಿ ಮಧ್ಯಮಫಲ ಲಭಿಸುತ್ತದೆ. ಶತ್ರುನವಾಂಶದಲ್ಲಿ ಶುಭಫಲವು ಲಘು ಆಗುತ್ತದೆ, ಅಶುಭಫಲವು ಪುಷ್ಟ ಆಗುತ್ತದೆ.

(11) ಚಂದ್ರನಂತೆ ಲಗ್ನಕ್ಕೆ ಕೂಡಾ ಈ ಗ್ರಹದೃಷ್ಟಿಫಲವು ಅನ್ವಯಿಸುತ್ತದೆ.

(12) ಕುಜ-ಶನಿ, ರವಿ-ಶನಿ, ಕುಜ-ರವಿ ಇವರ ಪರಸ್ಪರ ದೃಷ್ಟಿಯು ಅಶುಭ ಫಲದಾಯಕ ಆಗಿರುತ್ತದೆ. ಪಾಪಗ್ರಹರು ಕೇಂದ್ರಸ್ಥಿತರಾಗಿ ಪರಸ್ಪರ ದೃಷ್ಟರಾದರೆ ಹಾನಿಕಾರಕರು ಅಥವಾ ಅಕಸ್ಮಾತ್ ಸಂಕಷ್ಟಗಳನ್ನು ತಂದೊಡ್ಡುತ್ತಾರೆ.

## ೧೩. ಗ್ರಹರ ನೈಸರ್ಗಿಕ ಮಿತ್ರತ್ವ ಮತ್ತು ಶತ್ರುತ್ವ

| ಗ್ರಹ | ಮಿತ್ರ | ಸಮ | ಶತ್ರು |
|---|---|---|---|
| ಸೂರ್ಯ | ಕುಜ, ಚಂದ್ರ, ಗುರು | ಬುಧ | ಶನಿ, ಶುಕ್ರ |
| ಚಂದ್ರ | ಸೂರ್ಯ, ಬುಧ | ಕುಜ, ಗುರು, ಶುಕ್ರ, ಶನಿ | — |
| ಕುಜ | ರವಿ, ಚಂದ್ರ, ಗುರು | ಶನಿ, ಶುಕ್ರ | ಬುಧ |
| ಬುಧ | ರವಿ, ಶುಕ್ರ | ಶನಿ, ಗುರು, ಕುಜ | ಚಂದ್ರ |
| ಗುರು | ರವಿ, ಚಂದ್ರ, ಕುಜ | ಶನಿ | ಬುಧ, ಶುಕ್ರ |
| ಶುಕ್ರ | ಬುಧ, ಶನಿ | ಕುಜ, ಗುರು | ರವಿ, ಚಂದ್ರ |
| ಶನಿ | ಶುಕ್ರ, ಬುಧ, | ಗುರು | ರವಿ, ಚಂದ್ರ, ಕುಜ |

ತತ್ಕಾಲ ಮಿತ್ರರು ಮತ್ತು ಶತ್ರುಗಳು: ಒಂದು ಗ್ರಹಸ್ಥಿತರಾಶಿಯಿಂದ 2, 3, 4, 10, 11 ಮತ್ತು 12ರಲ್ಲಿ ಇದ್ದ ಗ್ರಹರು, ಆ ಗ್ರಹನಿಗೆ ತತ್ಕಾಲ ಮಿತ್ರರು, ಅನ್ಯಥಾ ತತ್ಕಾಲ ಶತ್ರುಗಳು ಆಗುತ್ತಾರೆ.

ಗ್ರಹರ ನೈಸರ್ಗಿಕ ಮತ್ತು ತಾತ್ಕಾಲಿಕ ಮಿತ್ರತ್ವಾದಿಗಳನ್ನು ಸೇರಿಸುವ ಕ್ರಮ:

1. ನೈಸರ್ಗಿಕ ಮಿತ್ರ + ತಾತ್ಕಾಲಿಕ ಮಿತ್ರ = ಅಧಿಮಿತ್ರ
2. ನೈಸರ್ಗಿಕ ಮಿತ್ರ + ತಾತ್ಕಾಲಿಕ ಶತ್ರು = ಸಮ
3. ನೈಸರ್ಗಿಕ ಸಮ + ತಾತ್ಕಾಲಿಕ ಮಿತ್ರ = ಮಿತ್ರ
4. ನೈಸರ್ಗಿಕ ಸಮ + ತಾತ್ಕಾಲಿಕ ಶತ್ರು = ಶತ್ರು
5. ನೈಸರ್ಗಿಕ ಶತ್ರು + ತಾತ್ಕಾಲಿಕ ಮಿತ್ರ = ಸಮ
6. ನೈಸರ್ಗಿಕ ಶತ್ರು + ತಾತ್ಕಾಲಿಕ ಶತ್ರು = ಅಧಿಶತ್ರು

| | | ಚಂದ್ರ | |
|---|---|---|---|
| | | | |
| ಶನಿ | | | |
| ಶುಕ್ರ | ಕುಜ ಬುಧ | ರವಿ | ಗುರು |

ಮೇಲಿನ ಕುಂಡಲಿಯಲ್ಲಿ ಚಂದ್ರನಿಗೆ ಕುಜನು ನೈಸರ್ಗಿಕವಾಗಿ ಸಮನು, ತಾತ್ಕಾಲಿಕವಾಗಿ ಶತ್ರು, ಆದ್ದರಿಂದ ಮೇಲಿನ ಕುಂಡಲಿಯಲ್ಲಿ ಚಂದ್ರನಿಗೆ ಕುಜನು ಶತ್ರು. ಇತರ ಗ್ರಹರ ನೈಸರ್ಗಿಕ ಮತ್ತು ತಾತ್ಕಾಲಿಕ ಮಿತ್ರತ್ವಾದಿಗಳನ್ನು ಕೂಡಿಸಿ ಕೆಳಗೆ ಬರೆದಿರುತ್ತದೆ.

| | ರವಿ | ಚಂದ್ರ | ಕುಜ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|---|
| ರವಿ | — | ಸಮ | ಅಧಿಮಿತ್ರ | ಮಿತ್ರ | ಅಧಿಮಿತ್ರ | ಸಮ | ಸಮ |
| ಚಂದ್ರ | ಸಮ | — | ಶತ್ರು | ಸಮ | ಶತ್ರು | ಶತ್ರು | ಶತ್ರು |
| ಕುಜ | ಅಧಿಮಿತ್ರ | ಸಮ | — | ಅಧಿಶತ್ರು | ಅಧಿಮಿತ್ರ | ಮಿತ್ರ | ಮಿತ್ರ |
| ಬುಧ | ಅಧಿಮಿತ್ರ | ಅಧಿಶತ್ರು | ಶತ್ರು | — | ಮಿತ್ರ | ಅಧಿಮಿತ್ರ | ಮಿತ್ರ |
| ಗುರು | ಅಧಿಮಿತ್ರ | ಸಮ | ಅಧಿಮಿತ್ರ | ಸಮ | — | ಸಮ | ಶತ್ರು |
| ಶುಕ್ರ | ಸಮ | ಅಧಿಶತ್ರು | ಮಿತ್ರ | ಅಧಿಮಿತ್ರ | ಮಿತ್ರ | — | ಅಧಿಮಿತ್ರ |
| ಶನಿ | ಸಮ | ಅಧಿಶತ್ರು | ಸಮ | ಅಧಿಮಿತ್ರ | ಶತ್ರು | ಅಧಿಮಿತ್ರ | — |

# ೧೪. ಗ್ರಹರ ಅವಸ್ಥೆಗಳು

ಗ್ರಹರಿಗೆ ಹತ್ತು ಅವಸ್ಥೆಗಳು ಇವೆ. (1) ತನ್ನ ಉಚ್ಚ ಅಥವಾ ಮೂಲ ತ್ರಿಕೋಣರಾಶಿಯಲ್ಲಿ ಇರುವ ಗ್ರಹನು ದೀಪ್ತನು (2) ಸ್ವಕ್ಷೇತ್ರದಲ್ಲಿ ಇರುವ ಗ್ರಹನು ಸ್ವಸ್ಥನು (3) ಮಿತಕ್ಷೇತ್ರದಲ್ಲಿರುವ ಗ್ರಹನು ಪ್ರಮುದಿತನು ಅಥವಾ ಹರ್ಷಿತನು (4) ಶುಭವರ್ಗಗಳಲ್ಲಿರುವ ಗ್ರಹನು ಶಾಂತನು (5) ರಶ್ಮಿಬಲಾಧಿಕ್ಯ ಇರುವ ಗ್ರಹನು ಶಕ್ತನು (6) ಶತ್ರುಗಳಿಂದ ಪೀಡಿತ ಅಥವಾ ಪರಾಜಿತ ಗ್ರಹನು ಪ್ರಪೀಡಿತನು (7) ಶತ್ರುಕ್ಷೇತ್ರ ಮತ್ತು ವರ್ಗಗಳಲ್ಲಿ ಇರುವ ಗ್ರಹನು ದೀನನು (8) ಪಾಪರಾಶಿ ವರ್ಗ ಮತ್ತು ಯೋಗಗಳಲ್ಲಿ ಇರುವ ಗ್ರಹನು ಖಲನು. (9) ನೀಚರಾಶಿಸ್ಥಿತಗ್ರಹನು ಭೀತನು (10) ಅಸ್ತನಾದಗ್ರಹನು ವಿಕಲನು ಆಗುತ್ತಾನೆ.

1. ದೀಪ್ತಗ್ರಹನು ಧನ, ಸಂಪತ್ತು, ಭೂಮಿ, ಐಶ್ವರ್ಯ, ವಾಹನ ಇತ್ಯಾದಿ ನೀಡುತ್ತಾನೆ. ಜಾತಕನು ಪ್ರತಾಪವಂತನಾಗಿ ಶತ್ರುಗಳನ್ನು ಜಯಿಸುತ್ತಾನೆ.

2. ಸ್ವಸ್ಥಗ್ರಹನು ಗೃಹ, ವಾಹನ, ಧನ, ಮಾನ–ಸನ್ಮಾನ ಇತ್ಯಾದಿ ನೀಡುತ್ತಾನೆ. ಜಾತಕನು ಬುದ್ಧಿವಂತನು, ಪ್ರತಾಪವಂತನು ಆಗುತ್ತಾನೆ. ಸೇನಾಧಿಪತ್ಯ ಲಭಿಸುತ್ತದೆ ಮತ್ತು ಶತ್ರುಗಳನ್ನು ನಾಶಮಾಡುತ್ತಾನೆ.

3. ಪ್ರಮುದಿತ ಗ್ರಹನು (ಹರ್ಷಿತ), ಧನ, ಕನಕ, ಯುವತಿ, ಸುಖ, ಸಂತೋಷ, ವಿಲಾಸ ಇತ್ಯಾದಿ ನೀಡುತ್ತಾನೆ. ಜಾತಕನಲ್ಲಿ ನ್ಯಾಯ ಮತ್ತು ಧರ್ಮನಿಷ್ಠೆ ಇರುತ್ತದೆ.

4. ಶಾಂತ ಗ್ರಹನು ಪ್ರಶಾಂತಚಿತ್ತ, ಧನ, ವಾಹನ ಸುಖ, ವಿಲಾಸ, ಸ್ವತಂತ್ರ ವ್ಯಾಪಾರ, ವ್ಯವಹಾರ ಇತ್ಯಾದಿ ನೀಡುತ್ತಾನೆ. ಜಾತಕನಿಗೆ ಮಂತ್ರಿ ಪದವಿ ಲಭಿಸುತ್ತದೆ. ಜಾತಕನು ವಿದ್ಯಾವಂತನು, ಪರಹಿತಸಾಧಕನು ಮತ್ತು ಧರ್ಮಪರಾಯಣನು ಆಗುತ್ತಾನೆ.

5. ಶಕ್ತಗ್ರಹನು ಸ್ತ್ರೀ, ವಸ್ತ್ರಾಭರಣ, ಉತ್ತಮ ಸೌಂದರ್ಯಸಾಧನಗಳು, ಕೀರ್ತಿ ಇತ್ಯಾದಿ ನೀಡುತ್ತಾನೆ. ಜಾತಕನು ಪರೋಪಕಾರಿ, ಸಜ್ಜನ, ಪ್ರಸನ್ನಚಿತ್ತ, ಸುಶೀಲನು, ಪ್ರಖ್ಯಾತನು ಆಗುತ್ತಾನೆ.

6. ಪ್ರಪೀಡಿತಗ್ರಹನು ದುಃಖ, ವ್ಯಾಧಿ, ಭಯ, ಶತ್ರುಗಳಿಂದ ಹಾನಿ, ಬಂಧುಗಳ ವಿಯೋಗ, ದೇಶಾಟನ ಇತ್ಯಾದಿ ನೀಡುತ್ತಾನೆ.

7. ದೀನಗ್ರಹನು ಧನನಾಶ, ಪರಾಜಯ, ಶತ್ರುಭಯ ಮತ್ತು ಕಷ್ಟ ನಷ್ಟ ನೀಡುತ್ತಾನೆ.

8. ಖಲಗ್ರಹನು ದುಃಖ, ಧನನಷ್ಟ, ಸ್ತ್ರೀವಿಯೋಗ, ಕ್ರೋಧ, ಸಂಪತ್ತಿನ ಅವನತಿ ಮಾನಸಿಕ ಪೀಡೆ, ದೇಶಾಂತರ, ಕಲಹ ಇತ್ಯಾದಿ ನೀಡುತ್ತಾನೆ.

9. ಭೀತಗ್ರಹನು ಸ್ಥಾನಚ್ಯುತಿ, ಧನಹಾನಿ, ಅತಿಭಯ, ಕ್ಲೇಶ, ಸ್ವಜನ ರೊಂದಿಗೆ ಕಲಹ, ಪರಾಜಯ ದೇಶಾಂತರ ಇತ್ಯಾದಿ ನೀಡುತ್ತಾನೆ.

10. ವಿಕಲಗ್ರಹನು ಮಾನಸಿಕ ಪೀಡೆ, ಧನನಾಶ, ಬಲಹೀನತೆ, ಸ್ತ್ರೀ ವಿಯೋಗ, ದೇಶತ್ಯಾಗ, ಸ್ಥಾನಚ್ಯುತಿ ಇತ್ಯಾದಿ ನೀಡುತ್ತಾನೆ.

11. **ಗ್ರಹಮೌಢ್ಯ:** ತಾರಾಗ್ರಹರು ಸೂರ್ಯನ ಸಮೀಪದಲ್ಲಿ ಸಂಚರಿಸು ವಾಗ ಕಂಡುಬರುವುದಿಲ್ಲ. ಇದನ್ನು ಗ್ರಹಮೌಢ್ಯ ಅಥವಾ ಅಸ್ತ ಎನ್ನು ತ್ತಾರೆ. ಅಸ್ತಗ್ರಹನು ಪುನಃ ಕಂಡುಬಂದ ದಿನ ಉದಯಿಸಿದ್ದಾನೆ ಎಂದು ತಿಳಿಯಬೇಕು. ಅಸ್ತಗ್ರಹರು ಸೂರ್ಯನ ಕಿರಣಗಳಿಂದ ತಮ್ಮ ಶಕ್ತಿಯನ್ನು ಕಳೆದುಕೊಳ್ಳುವುದರಿಂದ ಬಲಹೀನರು, ಅಶುಭಫಲದಾಯಕರು ಆಗುತ್ತಾರೆ.

12. **ಗ್ರಹಯುದ್ಧ:** ಎರಡು ತಾರಾಗ್ರಹರು ಯುತಿಯಲ್ಲಿ ಒಂದೇ ರೇಖೆ ಯಲ್ಲಿ ಇರುವಾಗ ಅವರ ಅಂತರವು ಒಂದು ಭಾಗಕ್ಕಿಂತ (1°) ಕಮ್ಮಿ ಇದ್ದರೆ ಅದನ್ನು ಗ್ರಹಯುದ್ಧ ಎಂದು ಕರೆಯುತ್ತಾರೆ. ಇವರಲ್ಲಿ ಪ್ರಕಾಶಮಾನವಾಗಿ ಉತ್ತರದಿಕ್ಕಿನಲ್ಲಿರುವ ಗ್ರಹನು ಜಯಿಸುತ್ತಾನೆ. ಕ್ಷೀಣಪ್ರಕಾಶದಿಂದ ದಕ್ಷಿಣ ದಿಕ್ಕಿನಲ್ಲಿರುವ ಗ್ರಹನು ಪರಾಜಿತನು ಆಗುತ್ತಾನೆ.

13. **ಶೀಘ್ರೋಚ್ಚ–ಮಂದೋಚ್ಚ:** ಕುಜಾದಿ ತಾರಾಗ್ರಹರ ಕಕ್ಷೆಯು ಸೂರ್ಯನಿಗೆ ಅತಿಸಮೀಪ ಇದ್ದರೆ ಅದು ಶೀಘ್ರೋಚ್ಚ ಮತ್ತು ತಾರಾ ಗ್ರಹನ ಕಕ್ಷೆಯು ಸೂರ್ಯನಿಗೆ ಅತಿದೂರ ಇದ್ದರೆ ಅದನ್ನು ಮಂದೋಚ್ಚ ಎನ್ನುತ್ತಾರೆ.

14. **ಅತಿಚಾರ:** ತಾರಾಗ್ರಹನು ಮಂದೋಚ್ಚದಿಂದ ಶೀಘ್ರೋಚ್ಚಕ್ಕೆ ಪರಿಭ್ರಮಿಸುವಾಗ ಸೂರ್ಯನ ಸಮೀಪ ಬಂದಂತೆ ಸೂರ್ಯನ ಆಕರ್ಷಣಾ ಶಕ್ತಿಯು ಪ್ರಬಲವಾಗುವುದರಿಂದ ಗ್ರಹನ ಚಲನಗತಿಯು ತೀವ್ರವಾಗುತ್ತದೆ. ಇದನ್ನು ಅತಿಚಾರ ಎನ್ನುತ್ತಾರೆ.

**15. ಸಮಾಗಮ:** ಗುರು, ಬುಧ ಮತ್ತು ಶುಕ್ರನು ಚಂದ್ರನ ಯುತಿಯಲ್ಲಿ ಇದ್ದರೆ ಅದನ್ನು ಸಮಾಗಮ ಎಂದು ಕರೆಯುತ್ತಾರೆ. ಸಮಾಗಮದಲ್ಲಿ ಇರುವ ಗ್ರಹನು ಶುಭಫಲವನ್ನು ನೀಡುತ್ತಾನೆ.

**16. ಶಶಿಮಂಗಳಯುತಿ:** ಕುಜನು ಚಂದ್ರನಯುತಿಯಲ್ಲಿ ಇದ್ದರೆ ಅದನ್ನು ಶಶಿಮಂಗಳಯೋಗ ಎಂದು ಕರೆಯುತ್ತಾರೆ. ಈ ಯೋಗವು ಮಿಶ್ರಫಲ ವನ್ನು ನೀಡುತ್ತದೆ.

**17. ಪಂಚಮಶನಿ:** ಜನನಕಾಲದ ಚಂದ್ರನಿಂದ ಪಂಚಮದಲ್ಲಿ ಸಂಚರಿಸುವ ಗೋಚರದ ಶನಿಯನ್ನು ಪಂಚಮಶನಿ ಎನ್ನುತ್ತಾರೆ. ಪಂಚಮದ ಶನಿಯು ಮಾನಸಿಕ ಅಶಾಂತಿ, ವಿಘ್ನ, ನಷ್ಟಾದಿ ಅಶುಭಫಲ ನೀಡುತ್ತಾನೆ.

**18. ಸಾಡೆಸಾತಿ:** ಜನನ ಕಾಲದಲ್ಲಿ ಚಂದ್ರಸ್ಥಿತ ರಾಶಿಯಿಂದ ದ್ವಾದಶ. ಚಂದ್ರಸ್ಥಿತರಾಶಿ ಮತ್ತು ಚಂದ್ರನಿಂದ ದ್ವಿತೀಯ ರಾಶಿಯಲ್ಲಿ ಶನಿ ಇದ್ದರೆ ಅದನ್ನು ಜನ್ಮ ಸಾಡೆಸಾತಿ ಎನ್ನುತ್ತಾರೆ. ಜನನ ಕಾಲದ ಚಂದ್ರನಿಂದ ದ್ವಾದಶ, ಚಂದ್ರಸ್ಥಿತರಾಶಿ, ಮತ್ತು ದ್ವಿತೀಯರಾಶಿಯಲ್ಲಿ ಚಾರದಶನಿಯು ಸಂಚರಿಸುವ ಕಾಲ ಸಾಡೆಸಾತಿ ಆಗಿರುತ್ತದೆ. ಸಾಮಾನ್ಯವಾಗಿ ಈ ಕಾಲದಲ್ಲಿ ದುಃಖ, ನಷ್ಟ, ಸಂಕಷ್ಟಾದಿಗಳನ್ನು ಎದುರಿಸಬೇಕಾಗುತ್ತದೆ.

**19. ವಕ್ರಗ್ರಹರು:** ತಾರಾಗ್ರಹರಾದ ಕುಜ. ಬುಧ, ಗುರು, ಶುಕ್ರ ಮತ್ತು ಶನಿಯು ಕೆಲವೊಮ್ಮೆ ರಾಶಿಯಲ್ಲಿ ಹಿಂದಕ್ಕೆ ಚಲಿಸುತ್ತಾರೆ. ಇದು ಗ್ರಹರ ವಕ್ರಗತಿ ಆಗಿರುತ್ತದೆ. ಗ್ರಹರು ವಕ್ರರಾಗಿ ಒಂದು ರಾಶಿಗಿಂತ ಹೆಚ್ಚಿಗೆ ಹಿಂದಕ್ಕೆ ಚಲಿಸುವುದಿಲ್ಲ. ವಕ್ರಗ್ರಹರು ಬಲಿಷ್ಠರು ಮತ್ತು ಅವರಿಗೆ ಉಚ್ಚದಷ್ಟೇ ಬಲ ಇರುತ್ತದೆ. ತನ್ನ ಉಚ್ಚರಾಶಿಯಲ್ಲಿರುವ ಗ್ರಹನು ವಕ್ರಗತಿಯಲ್ಲಿದ್ದರೆ ಫಲದಾಯಕನಲ್ಲ. ಶುಭಗ್ರಹನಾದ ಬುಧ, ಗುರು ಮತ್ತು ಶುಕ್ರನು ವಕ್ರನಾದಾಗ ಬಲಿಷ್ಠನಾಗಿ ರಾಜ್ಯಪ್ರದನು ಆಗುತ್ತಾನೆ. ಪಾಪಗ್ರಹನಾದ ಕುಜ ಮತ್ತು ಶನಿಯು ವಕ್ರನಾದಾಗ ದುಃಖ, ಅನಾವಶ್ಯಕ ಸಂಚಾರ ನೀಡುತ್ತಾನೆ.

**20. ಅತಿವಕ್ರಗ್ರಹ:** ಗ್ರಹನು ವಕ್ರಚಾರದಲ್ಲಿ ಹಿಂದಿನ ರಾಶಿಯನ್ನು ಪ್ರವೇಶಿಸಿದರೆ ಅವನನ್ನು ಅತಿವಕ್ರನೆಂದು ಕರೆಯುತ್ತಾರೆ. ಉಚ್ಚರಾಶಿಯಲ್ಲಿ ಅತಿವಕ್ರನಾದ ಗ್ರಹನು ಫಲದಾಯಕನಲ್ಲ. ಯಾಕೆಂದರೆ ಗ್ರಹನು ವಕ್ರನಾದಾಗ ರಾಶಿಯಲ್ಲಿ ಅಧಿಕಕಾಲ ನಿಲ್ಲುತ್ತಾನೆ, ಹಾಗೂ ಕೆಲವು ಭಾಗಗಳನ್ನು ಮೂರು ಬಾರಿ ಸಂಚರಿಸುತ್ತಾನೆ.

# ೧೫. ಗ್ರಹರ ಷಡ್ಬಲಗಳು

ಗ್ರಹರಿಗೆ ಆರು ವಿಧದ ಬಲಗಳು ಇರುತ್ತವೆ. ಇದನ್ನು ಷಡ್ಬಲ ಎಂದು ಕರೆಯುತ್ತಾರೆ. ಗ್ರಹರ ಷಡ್ಬಲ ಶೋಧನ ವಿಧಾನಗಳನ್ನು ಕೆಳಗೆ ಸೂಕ್ಷ್ಮವಾಗಿ ವಿವರಿಸಿರುತ್ತದೆ.

1. ಸ್ಥಾನಬಲ. 2. ದಿಗ್ಬಲ. 3. ಕಾಲಬಲ.
4. ಚೇಷ್ಟಾಬಲ. 5. ನೈಸರ್ಗಿಕ ಬಲ. 6. ದೃಗ್ಬಲ.

1. ಸ್ಥಾನಬಲ: A) ಉಚ್ಚಬಲ, B) ಸಪ್ತವರ್ಗಜಬಲ. C) ಯುಗ್ಮಾಯುಗ್ಮಬಲ, D) ಕೇಂದ್ರಾದಿಬಲ, E) ದ್ರೇಕ್ಕಾಣಬಲ.

A) ಉಚ್ಚಬಲ : ಗ್ರಹರಿಗೆ ತಮ್ಮ ಉಚ್ಚರಾಶಿಯಲ್ಲಿರುವಾಗ ಒಂದು ರೂಪಬಲ, ನೀಚದಲ್ಲಿ O ರೂಪಬಲ, ನಡುವಿನ ರಾಶಿಗಳಲ್ಲಿ ಸ್ಥಿತ ಗ್ರಹರ ಬಲವನ್ನು ತ್ರೈರಾಶಿಕ ಕ್ರಮದಿಂದ ಕಂಡುಹಿಡಿಯಬೇಕು, ಇದನ್ನು ಉಚ್ಚಬಲ ಎಂದು ಕರೆಯುತ್ತಾರೆ.

B) ಸಪ್ತವರ್ಗಜ ಬಲ:

a) ಮೂಲ ತ್ರಿಕೋಣದಲ್ಲಿರುವ ಗ್ರಹರಿಗೆ $\frac{3}{4}$ ರೂಪಬಲ
b) ಸ್ವಕ್ಷೇತ್ರದಲ್ಲಿರುವ ಗ್ರಹರಿಗೆ $\frac{1}{2}$ ರೂಪಬಲ
c) ಅಧಿಮಿತ್ರ ಕ್ಷೇತ್ರದಲ್ಲಿರುವ ಗ್ರಹರಿಗೆ $\frac{3}{8}$ ರೂಪಬಲ
d) ಮಿತ್ರ ಕ್ಷೇತ್ರದಲ್ಲಿರುವ ಗ್ರಹರಿಗೆ $\frac{1}{4}$ ರೂಪಬಲ
e) ಸಮ ಕ್ಷೇತ್ರದಲ್ಲಿರುವ ಗ್ರಹರಿಗೆ $\frac{1}{8}$ ರೂಪಲಲ
f) ಶತ್ರು ಕ್ಷೇತ್ರದಲ್ಲಿರುವ ಗ್ರಹರಿಗೆ $\frac{1}{16}$ ರೂಪಬಲ
g) ಅಧಿಶತ್ರು ಕ್ಷೇತ್ರದಲ್ಲಿರುವ ಗ್ರಹರಿಗೆ $\frac{1}{32}$ ರೂಪಬಲ

ಇದು ಗ್ರಹರ ಸಪ್ತವರ್ಗಜಬಲ ಆಗಿರುತ್ತದೆ.

**C) ಯುಗ್ಮಾಯುಗ್ಮಬಲ: ಚಂದ್ರ ಮತ್ತು ಶುಕ್ರರಿಗೆ**

| | | |
|---|---|---|
| ಸಮರಾಶಿಯಲ್ಲಿದ್ದರೆ | = | ಕಾಲುಬಲ ಅನ್ಯಥಾ ಇಲ್ಲ |
| ಸಮರಾಶಿ ನವಾಂಶದಲ್ಲಿದ್ದರೆ | = | ಕಾಲುಬಲ ಅನ್ಯಥಾ ಇಲ್ಲ |
| ಸಮರಾಶಿ, ಸಮನವಾಂಶದಲ್ಲಿದ್ದರೆ | = | ಅರ್ಧಬಲ ಅನ್ಯಥಾ ಇಲ್ಲ |

**ರವಿ–ಕುಜ–ಬುಧ–ಗುರು ಮತ್ತು ಶನಿ.**

| | | |
|---|---|---|
| ವಿಷಮರಾಶಿಯಲ್ಲಿದ್ದರೆ | ಕಾಲುಬಲ | ಅನ್ಯಥಾ ಇಲ್ಲ |
| ವಿಷಮರಾಶಿ ನವಾಂಶದಲ್ಲಿದ್ದರೆ | ಕಾಲುಬಲ | ಅನ್ಯಥಾ ಇಲ್ಲ |
| ವಿಷಮರಾಶಿ ಮತ್ತು ವಿಷಮ ನವಾಂಶದಲ್ಲಿದ್ದರೆ | ಅರ್ಧಬಲ | ಅನ್ಯಥಾ ಇಲ್ಲ |

ಇದು ಗ್ರಹರ ಯುಗ್ಮಾಯುಗ್ಮ ಬಲ ಆಗಿರುತ್ತದೆ.

**D) ಕೇಂದ್ರಾದಿ ಬಲ:** 1) ಕೇಂದ್ರ (ಲಗ್ನ, ಚತುರ್ಥ, ಸಪ್ತಮ ಮತ್ತು ದಶಮಭಾವ) ಸ್ಥಿತಗ್ರಹರಿಗೆ ಒಂದು ರೂಪಬಲ. 2) ಪಣಪರ (ದ್ವಿತೀಯ, ಪಂಚಮ, ಅಷ್ಟಮ ಮತ್ತು ಏಕಾದಶ ಭಾವ) ಸ್ಥಿತಗ್ರಹರಿಗೆ ಅರ್ಧರೂಪಬಲ 3) ಆಪೋಕ್ಲಿಮ (ತೃತೀಯ, ಷಷ್ಠ, ನವಮ ಮತ್ತು ದ್ವಾದಶ ಭಾವ) ಸ್ಥಿತ ಗ್ರಹರಿಗೆ ಕಾಲು ರೂಪಬಲ. ಇದನ್ನು ಗ್ರಹರ ಕೇಂದ್ರಾದಿಬಲ ಎಂದು ಕರೆಯುತ್ತಾರೆ.

**E) ದ್ರೇಕ್ಕಾಣ ಬಲ:** 1) ಸ್ತ್ರೀ ಗ್ರಹರು ಅಂದರೆ ಶುಕ್ರ ಮತ್ತು ಚಂದ್ರನು ರಾಶಿಯ ಅಂತ್ಯದ್ರೇಕ್ಕಾಣದಲ್ಲಿದ್ದರೆ ಅವರಿಗೆ ಕಾಲು ರೂಪಬಲ ಅನ್ಯಥಾ ಇಲ್ಲ.

2) ನಪುಂಸಕ ಗ್ರಹರು ಅಂದರೆ ಬುಧ ಮತ್ತು ಶನಿಯು ರಾಶಿಯ ಮಧ್ಯದ್ರೇಕ್ಕಾಣದಲ್ಲಿದ್ದರೆ ಅವರಿಗೆ ಕಾಲುಬಲ ಅನ್ಯಥಾ ಇಲ್ಲ.

3) ಪುರುಷಗ್ರಹರು ಅಂದರೆ ರವಿ, ಕುಜ ಮತ್ತು ಗುರುವು ರಾಶಿಯ ಆದಿದ್ರೇಕ್ಕಾಣದಲ್ಲಿದ್ದರೆ ಅವರಿಗೆ ಕಾಲುಬಲ ಅನ್ಯಥಾ ಇಲ್ಲ.

ಇದು ಗ್ರಹರ ದ್ರೇಕ್ಕಾಣಬಲ ಆಗಿರುತ್ತದೆ.

ಉಚ್ಚಬಲ, ಸಪ್ತವರ್ಗಜಬಲ, ಯುಗ್ಮಾಯುಗ್ಮಬಲ, ಕೇಂದ್ರಾದಿಬಲ ಮತ್ತು ದ್ರೇಕ್ಕಾಣಬಲಗಳ ಮೊತ್ತ ಸ್ಥಾನಬಲ ಆಗಿರುತ್ತದೆ.

## 2. ದಿಗ್ಬಲ :

| | | | |
|---|---|---|---|
| ಬುಧ ಮತ್ತು ಗುರುವಿಗೆ | ಲಗ್ನದಲ್ಲಿ ಒಂದುರೂಪ ದಿಗ್ಬಲ | ಸಪ್ತಮದಲ್ಲಿ | O ರೂಪದಿಗ್ಬಲ |
| ಶುಕ್ರ ಮತ್ತು ಚಂದ್ರನಿಗೆ | ಚತುರ್ಥದಲ್ಲಿ ,, | ದಶಮದಲ್ಲಿ | ,, |
| ರವಿ ಮತ್ತು ಕುಜನಿಗೆ | ದಶಮದಲ್ಲಿ ,, | ಚತುರ್ಥದಲ್ಲಿ | ,, |
| ಶನಿಗೆ | ಸಪ್ತಮದಲ್ಲಿ ,, | ಲಗ್ನದಲ್ಲಿ | ,, |

ನಡುವಣ ರಾಶಿಸ್ಥಿತಗ್ರಹರ ದಿಗ್ಬಲವನ್ನು ತ್ರೈರಾಶಿಕ ಕ್ರಮದಿಂದ ತಿಳಿಯಬೇಕು.

**3. ಕಾಲಬಲ :** a) ನತೋನ್ನತಬಲ. b) ಪಕ್ಷಬಲ. c) ದಿನರಾತ್ರಿ ತ್ರಿಭಾಗಬಲ. d) ವರ್ಷಪ ಬಲ. e) ಮಾಸಪಬಲ. f) ದಿನಪಬಲ. g) ಹೋರಾಪಬಲ.

**a) ನತೋನ್ನತ ಬಲ:** ಚಂದ್ರ, ಕುಜ ಮತ್ತು ಶನಿಯು ರಾತ್ರೆ ಕಾಲದಲ್ಲಿ ಬಲಿಷ್ಠರು. ರವಿ, ಗುರು ಮತ್ತು ಶುಕ್ರನು ಹಗಲಿನಲ್ಲಿ ಬಲಿಷ್ಠರು, ಬುಧನಿಗೆ ಯಾವ ಕಾಲದಲ್ಲೂ ಒಂದು ರೂಪಬಲ.

ಸಾಮಾನ್ಯವಾಗಿ ದಿನಬಲಗ್ರಹರಿಗೆ 12 ಗಂಟೆ ಮಧ್ಯಾಹ್ನ ಪೂರ್ಣಬಲ 12 ಗಂಟೆ ಮಧ್ಯರಾತ್ರೆ O ಬಲ. ರಾತ್ರೆಬಲ ಗ್ರಹರಿಗೆ ವ್ಯತಿರಿಕ್ತ. ನಡುವಿನ ಕಾಲದ ಬಲವನ್ನು ತ್ರೈರಾಶಿಕ ಕ್ರಮದಿಂದ ಶೋಧಿಸಬೇಕು, ಇದು ಗ್ರಹರ ನತೋನ್ನತಬಲ: ಆಗಿರುತ್ತದೆ.

**b) ಪಕ್ಷಬಲ :**

ಕ್ರೂರಗ್ರಹರು = ರವಿ, ಕುಜ ಮತ್ತು ಶನಿಯು ಕೃಷ್ಣಪಕ್ಷದಲ್ಲಿ ಬಲಿಷ್ಠರು. ಶುಭಗ್ರಹರು ಚಂದ್ರ, ಬುಧ, ಗುರು ಮತ್ತು ಶುಕ್ರನು ಶುಕ್ಲಪಕ್ಷದಲ್ಲಿ ಬಲಿಷ್ಠರು. ಕ್ರೂರಗ್ರಹರಿಗೆ ಅಮಾವಾಸ್ಯೆಯ ದಿನ ಒಂದುಬಲ. ಹುಣ್ಣಿಮೆಯಂದು O ಬಲ ಶುಭಗ್ರಹರಿಗೆ ಹುಣ್ಣಿಮೆಯ ದಿನ ಒಂದುಬಲ ಅಮಾವಾಸ್ಯೆಯಂದು O ಬಲ ಜನನವು ನಡುವಣ ತಿಥಿಯಲ್ಲಿ ಆದಾಗ, ಗ್ರಹರ ಪಕ್ಷಬಲವನ್ನು ತ್ರೈರಾಶಿಕ ಕ್ರಮದಿಂದ ತಿಳಿಯಬೇಕು. ಇದು ಗ್ರಹರ ಪಕ್ಷಬಲ ಆಗಿರುತ್ತದೆ.

**c) ದಿನರಾತ್ರಿ ತ್ರಿಭಾಗ ಬಲ:** ದಿನಮಾನವನ್ನು ಮೂರು ಭಾಗಗಳನ್ನಾಗಿ ಮಾಡಬೇಕು. ಮೊದಲನೆ ಭಾಗಕ್ಕೆ ಬುಧನು, ಎರಡನೇ ಭಾಗಕ್ಕೆ

ರವಿಯು ಮತ್ತು ಮೂರನೇ ಭಾಗಕ್ಕೆ ಶನಿಯು ದಿನ ತ್ರಿಭಾಗ ಅಧಿಪತಿ ಆಗಿರುತ್ತಾನೆ. ರಾತ್ರಿ ಮಾನದ ಪ್ರಥಮ ತ್ರಿಭಾಗಕ್ಕೆ ಚಂದ್ರನು, ದ್ವಿತೀಯ ಭಾಗಕ್ಕೆ ಶುಕ್ರನು ಅಧಿಪತಿ ಮತ್ತು ತೃತೀಯ ಭಾಗಕ್ಕೆ ಕುಜನು ಅಧಿಪತಿ ಆಗಿರುತ್ತಾನೆ. ಜನ್ಮ ತ್ರಿಭಾಗಾಧಿಪತಿಗೆ ಒಂದು ಬಲ. ಗುರುವಿಗೆ ಯಾವ ತ್ರಿಭಾಗದಲ್ಲಿ ಜನನ ಆದರೂ ಒಂದು ಬಲ. ಅನ್ಯಗ್ರಹರಿಗೆ ಇಲ್ಲ. ಇದನ್ನು ದಿನರಾತ್ರಿ ತ್ರಿಭಾಗ ಬಲ ಎಂದು ಕರೆಯುತ್ತಾರೆ.

d) ವರ್ಷಪಬಲ: ಜನ್ಮ ಸಂವತ್ಸರದ ಚೈತ್ರ ಶುಕ್ಲಪಾಡ್ಯ (ಚಾಂದ್ರ ಮಾನ ಯುಗಾದಿ) ದಿನಾಧಿಪತಿಯು ವರ್ಷಾಧಿಪತಿ ಆಗಿರುತ್ತಾನೆ. ವರ್ಷಾಧಿಪತಿಗೆ ಕಾಲುಬಲ. ಅನ್ಯರಿಗೆ ಇಲ್ಲ. ಇದನ್ನು ವರ್ಷಪಬಲ ಎಂದು ಕರೆಯುತ್ತಾರೆ.

e) ಮಾಸಪಬಲ: ಜನನ ಮಾಸದ ಶುಕ್ಲಪಾಡ್ಯ ದಿನಾಧಿಪತಿಯು ಮಾಸಾಧಿಪತಿ ಆಗಿರುತ್ತಾನೆ. ಮಾಸಾಧಿಪತಿಗೆ ಅರ್ಧಬಲ. ಅನ್ಯರಿಗೆ ಇಲ್ಲ. ಇದನ್ನು ಮಾಸಪಬಲ ಎಂದು ಕರೆಯುತ್ತಾರೆ.

f) ದಿನಪಬಲ: ಹುಟ್ಟಿದ ದಿನದ ಅಧಿಪತಿಯೇ ದಿನಪನು. ದಿನಪನಿಗೆ ಮುಕ್ಕಾಲುಬಲ. ಅನ್ಯರಿಗೆ ಇಲ್ಲ. ಇದನ್ನು ದಿನಪಬಲ ಎಂದು ಕರೆಯುತ್ತಾರೆ.

g) ಹೋರಾಪಬಲ: ಇದು ದಿನದ 24ನೇ ಒಂದು ಭಾಗ. ಆಯಾ ದಿನದ ಅಧಿಪತಿಯೇ ಮೊದಲನೇ ಹೋರಾಧಿಪ. ಅನಂತರದ ಹೋರೆಗಳಿಗೆ ಒಂದು ಗ್ರಹಬಿಟ್ಟು ಇನ್ನೊಂದನ್ನು ವ್ಯುತ್ಕ್ರಮವಾದ ಕ್ರಮದಲ್ಲಿ ಅಧಿಪತಿಗಳು ಆಗುತ್ತಾರೆ. ಜನನ ಹೋರಾ ಅಧಿಪತಿಗೆ ಒಂದು ಬಲ. ಅನ್ಯರಿಗೆ ಇಲ್ಲ. ಇದನ್ನು ಹೋರಾಪಬಲ ಎಂದು ಕರೆಯುತ್ತಾರೆ.

ಈ ನತೋನ್ನತಾದಿ ಏಳು ಬಲವನ್ನು ಕೂಡಿಸಿ ಲಭಿಸುವ ಮೊತ್ತವು ಕಾಲಬಲ ಆಗಿರುತ್ತದೆ.

4. ಚೇಷ್ಟಾಬಲ: 1. ಅಯನಬಲ
2. ಚೇಷ್ಟಿತಬಲ

ಉತ್ತರಾಯಣ ರಾಶಿಗಳಲ್ಲಿ ಸಾಯನ ಶುಕ್ರ, ಸೂರ್ಯ, ಕುಜ ಮತ್ತು ಗುರು ಇದ್ದರೆ, ಆ ಗ್ರಹರ ಕ್ರಾಂತಿಗೆ, ಮೇಷ, ವೃಷಭ ಮತ್ತು ಮಿಥುನಗಳಲ್ಲಿ 24°ಯನ್ನು ಕೂಡಿಸಿ, ಮಕರ, ಕುಂಭ ಮತ್ತು ಮೀನಗಳಲ್ಲಿ ಹಾಗೆಯೇ ಇಟ್ಟು ಬಂದ ಕ್ರಾಂತಿಯನ್ನು 48ರಿಂದ ಭಾಗಿಸಲಾಗಿ ಬರುವುದು ಅಯನಬಲ.

ಈ ಸಾಯನ ಗ್ರಹರು ದಕ್ಷಿಣಾಯನ ರಾಶಿಗಳಲ್ಲಿ ಇದ್ದರೆ ಆ ಗ್ರಹರ ಕ್ರಾಂತಿಗೆ, ತುಲಾ, ವೃಶ್ಚಿಕ ಮತ್ತು ಧನು ರಾಶಿಗಳಲ್ಲಿ 24°ಯನ್ನು ಕೂಡಿಸಿ, ಕರ್ಕಟಕ, ಸಿಂಹ ಮತ್ತು ಕನ್ಯಾರಾಶಿಗಳಲ್ಲಿ ಹಾಗೆಯೇ ಇಟ್ಟು ಬಂದ ಕ್ರಾಂತಿಯನ್ನು 48ರಿಂದ ಕಳೆದು ಶೇಷವನ್ನು 48ರಿಂದ ಭಾಗಿಸಲಾಗಿ ಬರುವುದು ಅಯನಬಲ.

ಸಾಯನ ಚಂದ್ರ, ಶನಿಗಳಿಗೆ ದಕ್ಷಿಣಾಯನ ರಾಶಿಗಳಲ್ಲಿದ್ದರೆ (ತುಲಾದಿ ಮೂರು ರಾಶಿಗಳಲ್ಲಿ ಇದ್ದರೆ 24°ಯನ್ನು ಕೂಡಿಸಿ, ಉಳಿದ ರಾಶಿಗಳಲ್ಲಿ ಹಾಗೆಯೇ ಇಟ್ಟು) ಬಂದ ಕ್ರಾಂತಿಯನ್ನು 48ರಿಂದ ಭಾಗಿಸಿದರೆ ಬರುವುದು ಅಯನಬಲ. ಉತ್ತರಾಯಣ ರಾಶಿಗಳಲ್ಲಿ ಈ ಗ್ರಹರು ಇದ್ದರೆ (ಮೇಷಾದಿ ಮೂರು ರಾಶಿಗಳಲ್ಲಿ ಇದ್ದರೆ 24°ಯನ್ನು ಕೂಡಿಸಿ, ಉಳಿದ ರಾಶಿಗಳಲ್ಲಿ ಹಾಗೆಯೇ ಇಟ್ಟು ಬಂದ ಕ್ರಾಂತಿಯನ್ನು 48ರಿಂದ ಕಳೆದು ಶೇಷವನ್ನು 48ರಿಂದ ಭಾಗಿಸಲಾಗಿ ಬರುವುದು ಅಯನಬಲ.

ಬುಧನು ದಕ್ಷಿಣಾಯನ ರಾಶಿಗಳಲ್ಲಿ ಅಥವಾ ಉತ್ತರಾಯಣ ರಾಶಿಗಳಲ್ಲಿ ಮೇಷಾದಿ ಮೂರು ಅಥವಾ ತುಲಾದಿ ಮೂರು ರಾಶಿಗಳಲ್ಲಿ ಬುಧನ ಕ್ರಾಂತಿಗೆ 24°ಯನ್ನು ಕೂಡಿಸಿ, ಉಳಿದ ರಾಶಿಗಳಲ್ಲಿ ಹಾಗೆಯೇ ಇಟ್ಟು ಬಂದ ಕ್ರಾಂತಿಯನ್ನು 48ರಿಂದ ಭಾಗಿಸಲಾಗಿ ಬರುವುದು ಬುಧನ ಅಯನಬಲ.

**2. ಚೇಷ್ಟಿತಬಲ:** ಸೂರ್ಯನ ಅಯನಬಲದಷ್ಟೇ ಬಲ, ಸೂರ್ಯನ ಚೇಷ್ಟಿತಬಲ ಆಗಿರುತ್ತದೆ. ಚಂದ್ರನ ಪಕ್ಷ ಬಲದಷ್ಟೇ ಬಲ ಚಂದ್ರನ ಚೇಷ್ಟಿತ ಬಲ ಆಗಿರುತ್ತದೆ. ಕುಜಾದಿ ಐದು ಗ್ರಹರ ಚೇಷ್ಟಿತಬಲವು ಆ ಗ್ರಹರ ಚೇಷ್ಟಾ ಕೇಂದ್ರಗಳು ಆರು ರಾಶಿಗಿಂತ ಹೆಚ್ಚಿಗಿದ್ದರೆ 12 ರಾಶಿಯಿಂದ ಕಳೆದಿಡಬೇಕು ಅಥವಾ ಹಾಗೆಯೇ ಇಟ್ಟು, ಬಂದ ಮೊತ್ತವನ್ನು ರಾಶಿಗಳನ್ನಾಗಿ ಮಾಡಿ 6ರಿಂದ ಭಾಗಿಸಿ ಬಂದ ಲಬ್ಧವು ಕುಜಾದಿ ಐದು ಗ್ರಹರ ಚೇಷ್ಟಿತಬಲ ಆಗಿರುತ್ತದೆ. ಚೇಷ್ಟಿತಬಲ ಮತ್ತು ಅಯನಬಲ ಕೂಡಿಸಿದರೆ ಚೇಷ್ಟಾಬಲ ಬರುತ್ತದೆ.

**5. ನೈಸರ್ಗಿಕಬಲ:** ಶನಿ—1/7 ರೂಪಬಲ
ಕುಜ—2/7 ,,
ಬುಧ—3/7 ,,
ಗುರು—4/7 ,,

ಶುಕ್ರ —5/7 ರೂಪಬಲ
ಚಂದ್ರ — 6/7 ,,
ರವಿ — 7/7 (ಒಂದು) ರೂಪಬಲ

6. ದೃಗ್ಬಲ : ಶುಭದೃಷ್ಟಿಯ ಚತುರ್ಥಾಂಶವನ್ನು ಕೊಡಿಸಬೇಕು. ಪಾಪದೃಷ್ಟಿಯ ಚತುರ್ಥಾಂಶವನ್ನು ಕಳೆಯಬೇಕು.

ಈ ವರೆಗೆ ಪ್ರಾಪ್ತ ಆರು ಬಲಗಳ ಮೊತ್ತವನ್ನು ಗ್ರಹರ ಷಡ್ಬಲ ಎಂದು ಕರೆಯುತ್ತಾರೆ.

ಸೂರ್ಯ-ಗುರುಗಳು ಆರುವರೆ ರೂಪಬಲವಿದ್ದರೆ ಬಲಿಷ್ಠರು, ಚಂದ್ರನು ಆರು ರೂಪಬಲವಿದ್ದರೆ ಬಲಿಷ್ಠನು, ಕುಜ-ಶನಿಗಳು ಐದು ರೂಪಬಲವಿದ್ದರೆ ಬಲಿಷ್ಠರು, ಬುಧನು ಏಳು ರೂಪಬಲವಿದ್ದರೆ ಬಲಿಷ್ಠನು, ಶುಕ್ರನು ಐದುವರೆ ರೂಪ ಬಲವಿದ್ದರೆ ಬಲಿಷ್ಠನು ಆಗುತ್ತಾನೆ. ಇದಕ್ಕಿಂತ ಕಮ್ಮಿ ರೂಪಬಲ ಇರುವ ಗ್ರಹರು ಬಲಹೀನರು ಆಗುತ್ತಾರೆ. ಬಲಿಷ್ಠರಾದ ಗ್ರಹರು ಶುಭ ಫಲವನ್ನು ನೀಡುತ್ತಾರೆ.

## ೧೬. ಗ್ರಹರ ದಶ ವರ್ಗಗಳು

1) ಲಗ್ನ 2) ಹೋರಾ 3) ದ್ರೇಕ್ಕಾಣ 4) ನವಾಂಶ 5) ದ್ವಾದಶಾಂಶ 6) ತ್ರಿಂಶಾಂಶ ಇವುಗಳನ್ನು ಷಡ್ವರ್ಗಗಳು ಎಂದು ಕರೆಯುತ್ತಾರೆ. ಇವುಗಳಿಗೆ 7) ಸಪ್ತಾಂಶವನ್ನು ಸೇರಿಸಿದರೆ ಸಪ್ತವರ್ಗ ಆಗುತ್ತದೆ. 8) ದಶಾಂಶ 9) ಷೋಡಶಾಂಶ ಮತ್ತು 10) ಕಲಾಂಶ, ಈ ಹತ್ತು ವರ್ಗಗಳನ್ನು ಗ್ರಹರ ದಶವರ್ಗಗಳು ಎಂದು ಕರೆಯುತ್ತಾರೆ. ಗ್ರಹರು ನೀಡುವ ಶುಭಾಶುಭ ಫಲಗಳನ್ನು ತಿಳಿಯಲು ಷಡ್ವರ್ಗಗಳು ಪ್ರಮುಖ್ಯವಾಗಿ ಸಹಾಯಕ ಆಗಿರುತ್ತದೆ.

**1. ಲಗ್ನ :** ಜನನ ಕಾಲದಲ್ಲಿ ಭೂಮಿಗೆ ಸಮಾನಾಂತರವಾಗಿ ಪೂರ್ವದಲ್ಲಿ ಉದಯವಾಗುವ ರಾಶಿಯನ್ನು ಲಗ್ನ ಎಂದು ಕರೆಯುತ್ತಾರೆ, ಜನನ ಕಾಲದಲ್ಲಿ ರಾಶಿಯ ಉದಿತ ಭಾಗವು ಲಗ್ನದ ಮಧ್ಯಭಾಗ ಆಗಿರುತ್ತದೆ. ಇದನ್ನು ಲಗ್ನಸ್ಫುಟ ಎಂದು ಮತ್ತು ಈ ರಾಶಿಯ ಅಧಿಪತಿಯನ್ನು ಲಗ್ನಾಧಿಪತಿ ಎಂದು ಕರೆಯುತ್ತಾರೆ. ಶರೀರದ ವಿಷಯ ಮತ್ತು ಜಾತಕನ ಗುಣಾವಗುಣ ಇತ್ಯಾದಿ ಲಗ್ನದಿಂದ ತಿಳಿಯಬಹುದು.

2. **ಹೋರಾ :** ಒಂದು ರಾಶಿಗೆ 30 ಭಾಗಗಳು, ಅರ್ಧರಾಶಿ ಅಂದರೆ 15 ಭಾಗಗಳಿಗೆ ಹೋರಾ ಎಂದು ಕರೆಯುತ್ತಾರೆ. ವಿಷಮ ರಾಶಿಗಳಲ್ಲಿ ಮೊದಲಿನ ಹೋರೆಗೆ (0°ಯಿಂದ 15°ವರೆಗೆ) ಸೂರ್ಯನು ಅಧಿಪತಿ. ಎರಡನೇ ಹೋರೆಗೆ (16°ಯಿಂದ 30°ವರೆಗೆ) ಚಂದ್ರನು ಅಧಿಪತಿ ಆಗಿರುತ್ತಾನೆ. ಸಮರಾಶಿಗಳಲ್ಲಿ ಮೊದಲಿನ ಹೋರೆಗೆ ಚಂದ್ರನು ಅಧಿಪತಿ ಮತ್ತು ಎರಡನೇ ಹೋರೆಗೆ ಸೂರ್ಯನು ಅಧಿಪತಿ ಆಗಿರುತ್ತಾನೆ. ಧನಸಂಪತ್ತಿನ ವಿಚಾರಗಳನ್ನು ಹೋರೆಯಿಂದ ತಿಳಿಯಬಹುದು.

3. **ದ್ರೇಕ್ಕಾಣ:** ಒಂದು ರಾಶಿಯನ್ನು ಮೂರು ಭಾಗಗಳನ್ನಾಗಿ ಮಾಡುತ್ತಾರೆ. ಪ್ರತಿ ಒಂದು ವಿಭಾಗವನ್ನು (10°) ದ್ರೇಕ್ಕಾಣ ಎಂದು ಕರೆಯುತ್ತಾರೆ. ಆಯಾ ರಾಶಿಯ ಅಧಿಪತಿಯು ಮೊದಲಿನ ದ್ರೇಕ್ಕಾಣದ ಅಧಿಪತಿ ಮತ್ತು ಆ ರಾಶಿಯಿಂದ ಒಂಭತ್ತನೇ ರಾಶ್ಯಾಧಿಪತಿಯು ಮೂರನೇ ದ್ರೇಕ್ಕಾಣದ ಅಧಿಪತಿ ಆಗಿರುತ್ತಾನೆ. ಕರ್ಮಫಲ ವಿಚಾರ ದ್ರೇಕ್ಕಾಣದಿಂದ ತಿಳಿಯಬಹುದು.

ಆ ರಾಶಿಯಿಂದ ಐದನೇ ರಾಶ್ಯಾಧಿಪತಿಯು ಎರಡನೇ ದ್ರೇಕ್ಕಾಣದ ಅಧಿಪತಿ ಆಗಿರುತ್ತಾನೆ.

4. **ನವಾಂಶ :** ಒಂದು ರಾಶಿಯನ್ನು ಒಂಭತ್ತು ವಿಭಾಗಗಳನ್ನಾಗಿ ಮಾಡುತ್ತಾರೆ. ಪ್ರತಿ ಒಂದು ವಿಭಾಗವು 3° 20′ ಆಗಿರುತ್ತದೆ. ಇದನ್ನು ನವಾಂಶ ಎಂದು ಕರೆಯುತ್ತಾರೆ. ಹನ್ನೆರಡು ರಾಶಿಗಳಿಗೆ 108 ನವಾಂಶಗಳು ಮತ್ತು 27 ನಕ್ಷತ್ರಗಳಿಗೆ 108 ಚರಣಗಳು ಇರುತ್ತವೆ. ಆದ್ದರಿಂದ ಒಂದು ನವಾಂಶ ಎಂದರೆ ಒಂದು ನಕ್ಷತ್ರ ಚರಣ ಆಗಿರುತ್ತದೆ. ಅಶ್ವಿನಿ, ಭರಣಿ ಮತ್ತು ಕೃತ್ತಿಕಾ ಈ ಮೂರು ನಕ್ಷತ್ರಗಳಿಗೆ 12 ಚರಣಗಳು, ಅಂದರೆ 12 ನವಾಂಶಗಳು ಆಗುತ್ತವೆ. ಮೊದಲನೇ ನವಾಂಶವನ್ನು ಮೇಷದಿಂದ ಎಣಿಸಿ ಕ್ರಮವಾಗಿ ಮೀನದ ವರೆಗೆ ಹನ್ನೆರಡು ನವಾಂಶಗಳು ಆಗುತ್ತವೆ. ಇದೇ ರೀತಿ ಕ್ರಮವಾಗಿ ಮೀನದ ವರೆಗೆ ಮೂರು ಮೂರು ನಕ್ಷತ್ರಗಳನ್ನು ಲೆಕ್ಕಮಾಡಿ, ಗ್ರಹಸ್ಥಿತ ನವಾಂಶವನ್ನು ಕಂಡುಹಿಡಿಯಬೇಕು.

1. ನವಾಂಶ ವಿಧಿಯು ಪ್ರತಿಯೊಂದು ಚರರಾಶಿಯಿಂದ ಪ್ರಾರಂಭ ಆಗುತ್ತದೆ. ಮೇಷ, ಮಕರ, ತುಲಾ ಮತ್ತು ಕರ್ಕಟಕ ಈ ನಾಲ್ಕು ರಾಶಿಗಳು ಚರರಾಶಿಗಳು ಆಗಿರುತ್ತವೆ.

2. ಪ್ರತಿ ಒಂದು ಅಗ್ನಿರಾಶಿಯ ನವಾಂಶವು ಅಗ್ನಿರಾಶಿಯಿಂದಲೇ ಪ್ರಾರಂಭ ಆಗುತ್ತದೆ. ಇದು ಮೇಲೆ ಹೇಳಿದಂತೆ ಚರರಾಶಿ ಆಗಿರಬೇಕು. ಆದ್ದರಿಂದ ಚರ-ಅಗ್ನಿ ರಾಶಿಯು ಮೇಷರಾಶಿ ಆಗಿರುತ್ತದೆ.

3. ಪ್ರತಿ ಒಂದು ಭೂರಾಶಿಯ ನವಾಂಶವು ಚರ-ಭೂರಾಶಿಯಿಂದಲೇ ಪ್ರಾರಂಭ ಆಗುತ್ತದೆ. ಚರ-ಭೂರಾಶಿಯು ಮಕರರಾಶಿ ಆಗಿರುತ್ತದೆ.

4. ಪ್ರತಿಒಂದು ವಾಯುರಾಶಿಯ ನವಾಂಶವು ಚರ-ವಾಯು ರಾಶಿ ಯಿಂದಲೇ ಪ್ರಾರಂಭ ಆಗುತ್ತದೆ. ಚರ-ವಾಯು ರಾಶಿಯು ತುಲಾರಾಶಿ ಆಗಿರುತ್ತದೆ.

5. ಪ್ರತಿ ಒಂದು ಜಲರಾಶಿಯ ನವಾಂಶವು ಚರ-ಜಲರಾಶಿಯಿಂದಲೇ ಪ್ರಾರಂಭ ಆಗುತ್ತದೆ. ಚರ-ಜಲ ರಾಶಿಯು ಕರ್ಕಟಕರಾಶಿ ಆಗಿರುತ್ತದೆ.

ಆಯಾರಾಶಿಗಳಲ್ಲಿ ಆಯಾರಾಶಿಯ ನವಾಂಶದಲ್ಲಿ ಲಗ್ನ ಅಥವಾ ಗ್ರಹರು ಇದ್ದರೆ ಅದನ್ನು ವರ್ಗೋತ್ತಮ ನವಾಂಶ ಅಂದರೆ ನವಾಂಶದಲ್ಲಿ ಶ್ರೇಷ್ಠ. ಎಂದು ಕರೆಯುತ್ತಾರೆ. ಇದು ಶುಭಫಲದಾಯಕ ಆಗಿರುತ್ತದೆ.

ಪ್ರತಿಯೊಂದು ಚರರಾಶಿಯಲ್ಲಿ ಮೊದಲನೇ ನವಾಂಶವು, ಸ್ಥಿರರಾಶಿಯಲ್ಲಿ 5ನೇ ಅಥವಾ ಮಧ್ಯನವಾಂಶವು ಮತ್ತು ಉಭಯರಾಶಿಯಲ್ಲಿ ಅಂತ್ಯನವಾಂಶವು ವರ್ಗೋತ್ತಮ ನವಾಂಶ ಆಗಿರುತ್ತದೆ. ವರ್ಗೋತ್ತಮ ನವಾಂಶದಲ್ಲಿ ಜನಿಸಿ ದವನು ತನ್ನ ಕುಟುಂಬದಲ್ಲಿ ಪ್ರಮುಖನು ಆಗುತ್ತಾನೆ. ನವಾಂಶದಿಂದ ಸಂತತಿ ವಿಚಾರವನ್ನು ತಿಳಿಯಬಹುದು.

| 9 | 1 | 5 | 9 |
|---|---|---|---|
| 5 | ವರ್ಗೋತ್ತಮ | | 1 |
| 1 | ನವಾಂಶ | | 5 |
| 9 | 5 | 1 | 9 |

5. ದ್ವಾದಶಾಂಶ: ಪ್ರತಿ ಒಂದು ರಾಶಿಯನ್ನು ಹದಿನೆರಡು ವಿಭಾಗ ಗಳನ್ನಾಗಿ ಮಾಡುತ್ತಾರೆ. ಪ್ರತಿ ಒಂದು ವಿಭಾಗವನ್ನು (12°30′) ದ್ವಾದಶಾಂಶ

ಎಂದು ಕರೆಯುತ್ತಾರೆ. ಆಯಾ ರಾಶಿಗಳಲ್ಲಿ ಮೊದಲನೇ ದ್ವಾದಶಾಂಶವು ಅದೇ ರಾಶಿಗೆ ಮತ್ತು ಆ ರಾಶ್ಯಾಧಿಪತಿಯೂ ದ್ವಾದಶಾಂಶದ ಅಧಿಪತಿ ಆಗುತ್ತಾನೆ. ಅನಂತರ ಕ್ರಮವಾಗಿ ರಾಶಿಗಳ ಅಧಿಪತಿಗಳು ಉಳಿದ ದ್ವಾದಶಾಂಶದ ಅಧಿಪತಿಗಳು ಆಗುತ್ತಾರೆ. ದ್ವಾದಶಾಂಶದಿಂದ ಪತ್ನೀ ವಿಚಾರವನ್ನು ತಿಳಿಯಬಹುದು.

**6. ತ್ರಿಂಶಾಂಶ :** ಒಂದು ರಾಶಿಗೆ ಮೂವತ್ತು ಭಾಗಗಳು. ಒಂದು ಭಾಗ (1°) ಅಂದರೆ ಒಂದು ತ್ರಿಂಶಾಂಶ ಆಗಿರುತ್ತದೆ. ವಿಷಮ ರಾಶಿಗಳಲ್ಲಿ ಮೊದಲಿನ 5 ಭಾಗಕ್ಕೆ (0°—5°) ಕುಜನು ಅಧಿಪತಿ ನಂತರದ ಐದು ಭಾಗಕ್ಕೆ (6°—10°) ಶನಿಯು ಅಧಿಪತಿ. ನಂತರದ ಎಂಟು ಭಾಗಗಳಿಗೆ (11°—18°) ಗುರುವು ಅಧಿಪತಿ. ನಂತರದ ಏಳು ಭಾಗಗಳಿಗೆ (19—25°) ಬುಧನು ಅಧಿಪತಿ ಮತ್ತು ಕೊನೆಯ ಐದು ಭಾಗಗಳಿಗೆ (26°—30°) ಶುಕ್ರನು ಅಧಿಪತಿ ಆಗಿರುತ್ತಾನೆ.

ಸಮರಾಶಿಗಳಲ್ಲಿ ಕ್ರಮವಾಗಿ 1°ಯಿಂದ 5°ವರೆಗೆ ಶುಕ್ರನು, 6°ಯಿಂದ 12°ವರೆಗೆ ಬುಧನು, 13°ಯಿಂದ 20°ವರೆಗೆ ಗುರುವು, 21°ಯಿಂದ 25° ವರೆಗೆ ಶನಿಯು ಮತ್ತು 26°ಯಿಂದ 30°ವರೆಗೆ ಕುಜನು ಅಧಿಪತಿ ಆಗಿರುತ್ತಾನೆ. ಮೃತ್ಯು ವಿಚಾರವನ್ನು ತ್ರಿಂಶಾಂಶದಿಂದ ತಿಳಿಯಬಹುದು.

**7. ಸಪ್ತಾಂಶ:** ಒಂದು ರಾಶಿಯನ್ನು ಏಳು ವಿಭಾಗಗಳನ್ನಾಗಿ ಮಾಡುತ್ತಾರೆ. ಪ್ರತಿ ಒಂದು ಭಾಗವು ($4°.17\frac{1}{7}'$) ಒಂದು ಸಪ್ತಾಂಶ ಆಗಿರುತ್ತದೆ. ವಿಷಮರಾಶಿಗಳಲ್ಲಿ ಸಪ್ತಾಂಶವು ಆಯಾರಾಶಿಯಿಂದ ಪ್ರಾರಂಭವಾಗಿ ಅಲ್ಲಿಂದ ಏಳು ರಾಶಿಗಳ ಅಧಿಪತಿಗಳು ಅನುಕ್ರಮವಾಗಿ ಸಪ್ತಾಂಶದ ಅಧಿಪತಿಗಳು ಆಗುತ್ತಾರೆ. ಸಮರಾಶಿಗಳಲ್ಲಿ ಆಯಾರಾಶಿಯ ಸಪ್ತಮದಿಂದ ಪ್ರಾರಂಭಿಸಿ ಅಲ್ಲಿಂದ ಅನುಕ್ರಮವಾಗಿ ಏಳು ರಾಶಿಗಳ ಅಧಿಪತಿಗಳು ಸಪ್ತಾಂಶದ ಅಧಿಪತಿಗಳು ಆಗುತ್ತಾರೆ. ಪಾಪಗ್ರಹರ ಸಪ್ತಾಂಶದಲ್ಲಿ ಜನಿಸಿದವರು ಕ್ರೂರ ಸ್ವಭಾವದವರು ಮತ್ತು ಶುಭಗ್ರಹರ ಸಪ್ತಾಂಶದಲ್ಲಿ ಜನಿಸಿದವರು ಸೌಮ್ಯ ಸ್ವಭಾವದವರು ಆಗುತ್ತಾರೆ. ಸಪ್ತಾಂಶದಿಂದ ಭ್ರಾತೃ ಚಿಂತನೆ ಮಾಡುತ್ತಾರೆ.

**8. ದಶಾಂಶ :** ಒಂದು ರಾಶಿಯನ್ನು ಹತ್ತು ಭಾಗಗಳನ್ನಾಗಿ ಮಾಡುತ್ತಾರೆ. ಪ್ರತಿ ಒಂದು ಭಾಗವು (3°) ಒಂದು ದಶಾಂಶ ಆಗಿರುತ್ತದೆ. ವಿಷಮ ರಾಶಿಗಳಲ್ಲಿ ಆ ರಾಶಿಯಿಂದ ಪ್ರಾರಂಭಿಸಿ ಅಲ್ಲಿಂದ ಹತ್ತು ರಾಶಿಗಳ ಅಧಿಪತಿ

ಗಳು ಅನುಕ್ರಮವಾಗಿ ದಶಾಂಶಾಧಿಪತಿಗಳು ಆಗುತ್ತಾರೆ. ಸಮರಾಶಿಗಳಲ್ಲಿ ಆಯಾ ರಾಶಿಗಳ ನವಮದಿಂದ ಪ್ರಾರಂಭಿಸಿ ಅಲ್ಲಿಂದ ಹತ್ತು ರಾಶಿಗಳ ಅಧಿಪತಿ ಗಳು ಅನುಕ್ರಮವಾಗಿ ದಶಾಂಶಾಧಿಪತಿಗಳು ಆಗುತ್ತಾರೆ.

**9. ಕಲಾಂಶ :** (ಷೋಡಶಾಂಶ) ಒಂದು ರಾಶಿಯನ್ನು ಹದಿನಾರು ವಿಭಾಗಗಳನ್ನಾಗಿ ಮಾಡುತ್ತಾರೆ. ಪ್ರತಿ ಒಂದು ಭಾಗವು ($1\frac{7}{8}°$) ಒಂದು ಕಲಾಂಶ ಆಗಿರುತ್ತದೆ. ವಿಷಮ ರಾಶಿಗಳಲ್ಲಿ ಆಯಾರಾಶಿಯಿಂದ ಪ್ರಾರಂಭ ವಾಗಿ ಅಲ್ಲಿಂದ ಹನ್ನೆರಡು ರಾಶಿಗಳ ಅಧಿಪತಿಗಳು ಅನುಕ್ರಮವಾಗಿ ಹನ್ನೆರಡು ಕಲಾಂಶಗಳ ಅಧಿಪತಿಗಳು ಆಗುತ್ತಾರೆ. ಉಳಿದ ನಾಲ್ಕು ಕಲಾಂಶಗಳಿಗೆ ಬ್ರಹ್ಮ, ವಿಷ್ಣು, ಹರ ಮತ್ತು ರವಿಯು ಅಧಿಪತಿಗಳು ಆಗಿರುತ್ತಾರೆ. ಸಮರಾಶಿಗಳಲ್ಲಿ ವ್ಯುತ್ಕ್ರಮವಾಗಿ ಕಲಾಂಶಾಧಿಪತಿಗಳು ಆಗುತ್ತಾರೆ. ಇಲ್ಲಿ ಕೆಲವರು ಬ್ರಹ್ಮ ಅಂದರೆ ಶನಿ, ವಿಷ್ಣು ಅಂದರೆ ಬುಧ, ಹರ ಅಂದರೆ ಕುಜ ಮತ್ತು ರವಿ ಅಂದರೆ ಸೂರ್ಯ ಎಂದು ಹೇಳುತ್ತಾರೆ. ಇನ್ನು ಕೆಲವರು ನವಮ, ದಶಮ, ಏಕಾದಶ ಮತ್ತು ದ್ವಾದಶಾಧಿಪತಿಗಳು ಕ್ರಮವಾಗಿ ಕೊನೆಯ ನಾಲ್ಕು ಕಲಾಂಶಗಳಿಗೆ ಅಧಿಪತಿಗಳು ಎಂದು ಹೇಳುತ್ತಾರೆ.

**10. ಷಷ್ಟ್ಯಂಶ :** ಪ್ರತಿ ಒಂದು ರಾಶಿಯ $\frac{1}{60}$ ಭಾಗಕ್ಕೆ ಷಷ್ಟ್ಯಂಶ ($\frac{1}{2}°$) ಎಂದು ಕರೆಯುತ್ತಾರೆ. ವಿಷಮ ರಾಶಿಗಳಲ್ಲಿ 1, 2, 8, 9, 10, 12, 15, 16, 30, 31, 32, 33, 34, 35, 39, 40, 42, 43, 44, 45, 48, 51, 52 ಮತ್ತು 59ನೇ ಷಷ್ಟ್ಯಂಶ ಕ್ರೂರ ಷಷ್ಟ್ಯಂಶಗಳು, ಉಳಿದ ಅಂಶಗಳು ಸೌಮ್ಯ ಷಷ್ಟ್ಯಂಶಗಳು ಆಗಿರುತ್ತವೆ. ಸಮರಾಶಿಗಳಲ್ಲಿ ಇವು ಸೌಮ್ಯ ಷಷ್ಟ್ಯಂಶಗಳು ಮತ್ತು ಉಳಿದ ಅಂಶಗಳು ಕ್ರೂರಷಷ್ಟ್ಯಂಶ ಆಗಿರುತ್ತದೆ.

**ವೈಶೇಶಿಕಾಂಶ:** ಉಚ್ಚ, ಸ್ವಕ್ಷೇತ್ರ, ಮೂಲತ್ರಿಕೋಣ ವರ್ಗೋತ್ತಮ, ಸ್ವನವಾಂಶ ಆದಿವರ್ಗಗಳಲ್ಲಿ ಸ್ಥಿತಗ್ರಹನು ಉತ್ತಮ ಫಲವನ್ನು ನೀಡುತ್ತಾನೆ. ಒಬ್ಬ ಗ್ರಹನು 2 ವರ್ಗಗಳಲ್ಲಿದ್ದರೆ ಪಾರಿಜಾತಾಂಶನು, 3 ವರ್ಗಸ್ಥಿತ ಗ್ರಹ ಉತ್ತಮಾಂಶ, 4 ವರ್ಗಸ್ಥಿತಗ್ರಹ ಗೋಪುರಾಂಶ, 5 ವರ್ಗಸ್ಥಿತ ಗ್ರಹ ಸಿಂಹಾಸ ನಾಂಶ, ಆರು ವರ್ಗಸ್ಥಿತ ಪಾರಾವತಾಂಶ, ಏಳು ವರ್ಗಸ್ಥಿತ ದೇವಲೋಕಾಂಶ, ಎಂಟು ವರ್ಗಸ್ಥಿತ ಸುರಲೋಕಾಂಶ ಮತ್ತು ಒಂಭತ್ತು ವರ್ಗಸ್ಥಿತ ಗ್ರಹನು ಐರಾವತಾಂಶನು ಎಂದು ಕರೆಯುತ್ತಾರೆ.

ಉದಾ: ರವಿಯು ಸಿಂಹರಾಶಿಯಲ್ಲಿ 1°30'ನಲ್ಲಿ ಇದ್ದಾನೆ. (1) ಅವನು ಸ್ವಕ್ಷೇತ್ರ 2) ಸ್ವದ್ರೇಕ್ಕಾಣ 3) ಸ್ವಸಪ್ತಾಂಶ 4) ಸ್ವದಶಾಂಶ 5) ಸ್ವದ್ವಾದಶಾಂಶ 6) ಸ್ವಕಲಾಂಶದಲ್ಲಿ ಇದ್ದಾನೆ. ಆದ್ದರಿಂದ ರವಿಯು ಪಾರಾವತಾಂಶದಲ್ಲಿ ಇದ್ದಾನೆ.

ಪಾರಿಜಾತಾಂಶದಲ್ಲಿದ್ದ ಗ್ರಹನು ಧನಧಾನ್ಯ, ಸುಖ, ಅಧಿಕಾರ, ವಿನಯ, ಸನ್ಮಾನ ಇತ್ಯಾದಿ ನೀಡುತ್ತಾನೆ.

ಉತ್ತಮಾಂಶದಲ್ಲಿದ್ದ ಗ್ರಹನು ವಿನಯ, ನಿಪುಣತೆ, ಬುದ್ಧಿವಂತಿಕೆ, ಉತ್ತಮ ಗುಣ ಇತ್ಯಾದಿ ನೀಡುತ್ತಾನೆ.

ಗೋಪುರಾಂಶದಲ್ಲಿದ್ದ ಗ್ರಹನು ಉತ್ತಮಗುಣ, ಧನ, ಭೂಮಿ, ಪಶು, ಗೃಹ ಇತ್ಯಾದಿ ನೀಡುತ್ತಾನೆ.

ಸಿಂಹಾಸನಾಂಶದಲ್ಲಿದ್ದ ಗ್ರಹನು ರಾಜಸನ್ಮಾನಗಳನ್ನು ನೀಡುತ್ತಾನೆ, ಅಥವಾ ರಾಜತುಲ್ಯನು ಆಗುತ್ತಾನೆ.

ಪಾರಾವತಾಂಶದಲ್ಲಿದ್ದ ಗ್ರಹನು ವೈಭವ, ವಾಹನ, ಕೀರ್ತಿ ಇತ್ಯಾದಿ ನೀಡುತ್ತಾನೆ.

ದೇವಲೋಕಾಂಶದಲ್ಲಿದ್ದ ಗ್ರಹನು ಉತ್ತಮ ಗುಣಗಳನ್ನು, ಕೀರ್ತಿಯನ್ನು ಮತ್ತು ರಾಜ್ಯವನ್ನು ನೀಡುತ್ತಾನೆ.

ಸುರಲೋಕಾಂಶದಲ್ಲಿದ್ದ ಗ್ರಹನು ಭಾಗ್ಯ, ಧನಧಾನ್ಯ, ಸಂತತಿ, ಸಂಪತ್ತು, ರಾಜ್ಯ ಇತ್ಯಾದಿ ನೀಡುತ್ತಾನೆ.

ಐರಾವತಾಂಶದಲ್ಲಿದ್ದ ಗ್ರಹನು ಜಾತಕನನ್ನು ರಾಜಾಧಿರಾಜನನ್ನಾಗಿ ಮಾಡುತ್ತಾನೆ. ಜನನ ಕಾಲದಲ್ಲಿ ದಶವರ್ಗಗಳಲ್ಲಿ ನಿರ್ಬಲನಾಗಿ ಸ್ಥಿತಗ್ರಹನು ಅಶುಭಫಲಗಳನ್ನು ನೀಡುತ್ತಾನೆ.

## ೧೭. ಭಾವಗಳು

ಲಗ್ನವು ಮೊದಲನೇ ಭಾವ ಆಗಿರುತ್ತದೆ. ಅನಂತರ ಕ್ರಮವಾಗಿ ಹನ್ನೆರಡು ರಾಶಿಗಳನ್ನು ದ್ವಿತೀಯ, ತೃತೀಯ, ಚತುರ್ಥ, ಪಂಚಮ, ಷಷ್ಠ, ಸಪ್ತಮ, ಅಷ್ಟಮ, ನವಮ, ದಶಮ, ಏಕಾದಶ ಮತ್ತು ದ್ವಾದಶಭಾವ ಎಂದು ಕರೆಯುತ್ತಾರೆ.

ಭಾವಗಳು ರಾಶಿಯಂತೆ 30 ಭಾಗಗಳು ಆಗಿರಬೇಕೆಂಬ ನಿಯಮ ಇರು ವುದಿಲ್ಲ. ಜನ್ಮಸ್ಥಳದ ಅಕ್ಷಾಂಶಕ್ಕೆ ಅನುಗುಣವಾಗಿ ಭಾವಪರಿಮಿತಿಯ ವೃದ್ಧಿ ಕ್ಷಯ ಆಗುತ್ತದೆ. ಲಗ್ನಸ್ಫುಟದ ಬಿಂದುವು ಲಗ್ನಭಾವದ ಮಧ್ಯಬಿಂದು ಆಗಿರುತ್ತದೆ. ಅಲ್ಲಿಂದ 15 ಭಾಗ ಹಿಂದೆ ಮತ್ತು 15 ಭಾಗ ಮುಂದೆ ಲಗ್ನ ಭಾವವು ಸಾಮಾನ್ಯವಾಗಿ ಇರುತ್ತದೆ.

ಉದಾ: ಜನನ ಲಗ್ನವು ಮಕರರಾಶಿಯ ೧೯ನೇ ಭಾಗದಲ್ಲಿ ಇದ್ದರೆ, ಇದಕ್ಕೆ 15 ಭಾಗ ಕೂಡಿಸಲು, ಲಗ್ನಭಾವವು ದ್ವಿತೀಯರಾಶಿಯಾದ ಕುಂಭದಲ್ಲಿ 4 ಭಾಗದ ವರೆಗೆ ಇರಬಹುದು ಮತ್ತು ಲಗ್ನಸ್ಫುಟ ಬಿಂದುವಿನಿಂದ ಹಿಂದೆ 15 ಭಾಗ ಅಂದರೆ ಮಕರರಾಶಿಯ 4ನೇ ಭಾಗದ ವರೆಗೆ ಲಗ್ನವು ಇರಬಹುದು ಈ ಉದಾ; ಜಾತಕದಲ್ಲಿ ಲಗ್ನವು ಮಕರರಾಶಿಯ 4ನೇ ಭಾಗದಿಂದ ಪ್ರಾರಂಭ ಆಗುತ್ತದೆ. ಇದನ್ನು ಲಗ್ನದ ಆರಂಭಸಂಧಿ ಎಂದು ಕರೆಯುತ್ತಾರೆ. ಮಕರ ರಾಶಿಯ 19ನೇ ಭಾಗ ಅಂದರೆ ಲಗ್ನಸ್ಫುಟವು ಲಗ್ನಭಾವ ಮಧ್ಯ ಆಗಿರುತ್ತದೆ, ಕುಂಭರಾಶಿಯ 4ನೇ ಭಾಗವು ಲಗ್ನಭಾವದ ಅಂತ್ಯ ಆಗಿರುತ್ತದೆ. ಇದನ್ನು ಲಗ್ನದ ವಿರಾಮಸಂಧಿ ಎಂದು ಕರೆಯುತ್ತಾರೆ.

ಲಗ್ನದ ಆರಂಭಸಂಧಿಯು ವ್ಯಯಭಾವದ ವಿರಾಮಸಂಧಿ ಆಗಿರುತ್ತದೆ. ಲಗ್ನದ ವಿರಾಮಸಂಧಿಯು ದ್ವಿತೀಯ ಭಾವದ ಆರಂಭಸಂಧಿ ಆಗಿರುತ್ತದೆ.

ಆರಂಭಸಂಧಿಯಿಂದ ಭಾವಮಧ್ಯದ ವರೆಗೆ ಇರುವ ಗ್ರಹರನ್ನು ಆರೋಹಿ ಗ್ರಹರು ಎಂದು ಕರೆಯುತ್ತಾರೆ. ಭಾವಮಧ್ಯದಿಂದ ವಿರಾಮಸಂಧಿಯವರೆಗೆ ಇರುವ ಗ್ರಹರನ್ನು ಅವರೋಹಿಗ್ರಹರು ಎಂದು ಕರೆಯುತ್ತಾರೆ.

ಸಕಲಗ್ರಹರು ಭಾವಮಧ್ಯದಲ್ಲಿ ಪೂರ್ಣ ಬಲಿಷ್ಠರು ಮತ್ತು ಭಾವಸಂಧಿ ಯಲ್ಲಿ ಅಫಲರು ಆಗಿರುತ್ತಾರೆ. ನಡುವಿನ ಭಾಗಗಳಲ್ಲಿ ತ್ರೈರಾಶಿಕ ಕ್ರಮದಿಂದ ಗ್ರಹರ ಬಲವನ್ನು ನಿರ್ಣಯಿಸಬೇಕು.

ಆರೋಹಿಗ್ರಹರು ಅಭಿವೃದ್ಧಿಯನ್ನು, ಭಾವಮಧ್ಯಸ್ಥಿತಗ್ರಹರು ಪೂರ್ಣ, ಶುಭ ಫಲವನ್ನು ಮತ್ತು ಅವರೋಹಿಗ್ರಹರು ಅವನತಿಯನ್ನು ನೀಡುತ್ತಾರೆ. ಭಾವಗಳನ್ನು ಗಣಿತರಿತ್ಯಾ ಸೂಕ್ಷ್ಮವಾಗಿ ಶೋಧಿಸುವ ಕ್ರಮವನ್ನು ಶ್ರೀಪತಿ ಪದ್ಧತಿ ಎಂಬ ಗ್ರಂಥದಲ್ಲಿ ವಿವರಿಸಿ ಬರೆದಿರುತ್ತಾರೆ.

1 **ಕೇಂದ್ರಗಳು:** ಲಗ್ನ, ಚತುರ್ಥ, ಸಪ್ತಮ ಮತ್ತು ದಶಮಭಾವ.
2 **ಪಣಘರ:** ದ್ವಿತೀಯ, ಪಂಚಮ, ಅಷ್ಟಮ ಮತ್ತು ಏಕಾದಶಭಾವ
3 **ಆಪೋಕ್ಲಿಮ:** ತೃತೀಯ, ಷಷ್ಠ, ನವಮ ಮತ್ತು ದ್ವಾದಶಭಾವ
4 **ತ್ರಿಕೋಣ:** ಪಂಚಮ ಮತ್ತು ನವಮಭಾವ
5 **ಉಪಚಯ:** ತೃತೀಯ, ಷಷ್ಠ, ದಶಮ ಮತ್ತು ಏಕಾದಶಭಾವ
6 **ಅನುಚಪಯ:** ಲಗ್ನ, ದ್ವಿತೀಯ, ಚತುರ್ಥ, ಪಂಚಮ, ಸಪ್ತಮ, ಅಷ್ಟಮ, ನವಮ ಮತ್ತು ದ್ವಾದಶ.
7 **ದುಸ್ಥಾನ:** (ತ್ರಿಕ) ಷಷ್ಠ, ಅಷ್ಟಮ ಮತ್ತು ದ್ವಾದಶಭಾವ
8 **ಚತುರಶ್ರ:** ಚತುರ್ಥ ಮತ್ತು ಅಷ್ಟಮಭಾವ
9 **ಆಯುಷ್ಯಸ್ಥಾನ:** ಅಷ್ಟಮ ಮತ್ತು ತೃತೀಯಭಾವ
10 **ಮಾರಕಸ್ಥಾನ:** ಸಪ್ತಮ ಮತ್ತು ದ್ವಿತೀಯಭಾವ
11 **ವೇಶಿಸ್ಥಾನ:** ಸೂರ್ಯನಿಂದ ದ್ವಿತೀಯ ಸ್ಥಾನ ವೇಶಿಸ್ಥಾನ
12 **ವಾಶಿಸ್ಥಾನ:** ಸೂರ್ಯನಿಂದ ದ್ವಾದಶಸ್ಥಾನ ವಾಶಿಸ್ಥಾನ
13 **ಲೀನಸ್ಥಾನ:** ತೃತೀಯ, ಷಷ್ಠ, ಅಷ್ಟಮ ಮತ್ತು ವ್ಯಯಭಾವ

ಗ್ರಹರು ಕೇಂದ್ರದಲ್ಲಿ ಬಲಿಷ್ಠರು. ಕೇಂದ್ರಸ್ಥಿತಗ್ರಹರು ಜಾತಕನನ್ನು ಪ್ರಸಿದ್ಧಿಗೆ ತರುತ್ತಾರೆ. ಕೇಂದ್ರದ ಗ್ರಹರು ಜೀವಿತದ ಆದಿತ್ರಿಭಾಗದಲ್ಲಿ ತಮ್ಮ ಪ್ರಭಾವವನ್ನು ಅಧಿಕವಾಗಿ ನೀಡುತ್ತಾರೆ. ಗ್ರಹರು ಪಣಪರದಲ್ಲಿ ಮಧ್ಯಮ ಬಲಿಷ್ಠರು. ಪಣಪರದ ಗ್ರಹರು ಯೌವನಕಾಲದಲ್ಲಿ ಶುಭಾಶುಭಫಲಗಳನ್ನು ನೀಡುತ್ತಾರೆ. ಗ್ರಹರು ಆಪೋಕ್ಲಿಮದಲ್ಲಿ ನಿರ್ಬಲರು. ಆಪೋಕ್ಲಿಮದ ಗ್ರಹರು ವಾರ್ಧಕ್ಯದಲ್ಲಿ ಫಲಾಫಲಗಳನ್ನು ನೀಡುತ್ತಾರೆ. ತ್ರಿಕೋಣದ ಗ್ರಹರು ಜೀವಿತದ ಉತ್ತರಾರ್ಧದಲ್ಲಿ ಸುಖ, ಸಂಪತ್ತನ್ನು ನೀಡುತ್ತಾರೆ. ಉಪಚಯದ ಗ್ರಹರು ಏಳಿಗೆಯನ್ನು ದುಸ್ಥಾನದ ಗ್ರಹರು ಅಶುಭ ಫಲಗಳನ್ನು ಮತ್ತು ಚತುರಶ್ರದ ಗ್ರಹರು ಮಿಶ್ರಫಲವನ್ನು ನೀಡುತ್ತಾರೆ. ಅಷ್ಟಮದ ಗ್ರಹರು ಏರಿಳಿತ, ಆಕಸ್ಮಾತ್ ಘಟನೆ ನೀಡುತ್ತಾರೆ, ತೃತೀಯದ ಗ್ರಹರು ಸತತ ಪ್ರಯತ್ನದಿಂದ ಸಫಲತೆ ನೀಡುತ್ತಾರೆ.

ಲಗ್ನ: ಪ್ರಥಮ ಭಾವವಾದ ಲಗ್ನವು ಜಾತಕನ ದೇಹ, ಆಕೃತಿ, ಗಾತ್ರ, ರೂಪ, ಗುಣ ಜಾತಿ, ವರ್ಣ, ಆರೋಗ್ಯ, ಬಲಾಬಲ, ಸುಖ, ದುಃಖ, ಯೋಗ್ಯತೆ, ಜ್ಞಾನ, ಶಿರಸ್ಸು ಮತ್ತು ಇಡೀ ಶರೀರವನ್ನು ಸೂಚಿಸುತ್ತದೆ, ಇದನ್ನು ಲಗ್ನ ಅಥವಾ ತನುಭಾವ ಎಂದು ಕರೆಯುತ್ತಾರೆ.

ದ್ವಿತೀಯ: ದ್ವಿತೀಯಭಾವವು ಧನ, ಸಂಪತ್ತು, ಸ್ವಭಾವ, ಮಾತು, ವಿದ್ಯೆ, ಕುಟುಂಬ, ನೇತ್ರ, ಭಕ್ಷಣೆ, ಧಾತು, ಮುಖ, ಮೃತ್ಯು, ಮಾರಕ ಸೂಚಿಸುತ್ತದೆ. ಇದನ್ನು ಧನ ಅಥವಾ ಕುಟುಂಬಭಾವ ಎಂದು ಕರೆಯುತ್ತಾರೆ.

ತೃತೀಯ: ತೃತೀಯಭಾವವು ಸಹೋದರರು, ಭೃತ್ಯರು ಸಹಾಯ ಶಕ್ತಿ, ಪರಾಕ್ರಮ ಸಾಹಸ, ಉಪದೇಶ, ಬಲಕಿವಿ, ಕಂಠ ಮತ್ತು ಚಿಕ್ಕ ಪ್ರಯಾಣ ಗಳನ್ನು ಸೂಚಿಸುತ್ತದೆ. ಇದನ್ನು ವಿಕ್ರಮ ಅಥವಾ ಭ್ರಾತೃಭಾವ ಎಂದು ಕರೆಯುತ್ತಾರೆ.

ಚತುರ್ಥ: ಚತುರ್ಥಭಾವವು ತಾಯಿ, ಸಂಬಂಧಿಕರು, ವಿದ್ಯೆ, ವಾಹನ, ಸುಖ, ಸೌಖ್ಯ, ಭೂಸಂಪತ್ತು, ನಿಧಿ, ಗೃಹ, ಕ್ಷೇತ್ರ, ವಸ್ತ್ರಾಭರಣ, ಹೆತ್ತವರ ಮರಣ, ಹೃದಯ ಇತ್ಯಾದಿ ಸೂಚಿಸುತ್ತದೆ. ಇದನ್ನು ಮಾತೃಸ್ಥಾನ ಅಥವಾ ಸುಖಸ್ಥಾನ ಎಂದು ಕರೆಯುತ್ತಾರೆ.

ಪಂಚಮ: ಪಂಚಮಭಾವವು ಸಂತಾನ, ಮನಸ್ಸು, ಮತ್ತು ಮಾನಸಿಕ ಶಕ್ತಿ, ವಿದ್ಯೆ, ಬುದ್ಧಿ, ನೀತಿ, ಜ್ಞಾನ, ಪ್ರತಿಭೆ, ಮಂತ್ರಸಿದ್ಧಿ, ಉದರ ಇತ್ಯಾದಿ ಸೂಚಿಸುತ್ತದೆ. ಇದನ್ನು ಪುತ್ರ ಅಥವಾ ಪೂರ್ವಪುಣ್ಯಸ್ಥಾನ ಎಂದು ಕರೆಯು ತ್ತಾರೆ.

ಷಷ್ಠ: ಷಷ್ಠಭಾವವು ಚಿಂತೆ ರೋಗ, ಸಾಲ, ಶತ್ರು, ವ್ಯಾಜ್ಯ, ಶಿಕ್ಷೆ, ಆಯುಧಗಳು, ವಿಘ್ನ, ಟೊಂಕ, ಗಾಯ, ವ್ರಣ, ಅಭಿಘಾತ, ಕ್ರೂರಕರ್ಮ ಇತ್ಯಾದಿ ಸೂಚಿಸುತ್ತದೆ. ಇದನ್ನು ವೈರಿ ಅಥವಾ ರೋಗಸ್ಥಾನ ಎಂದು ಕರೆಯುತ್ತಾರೆ,

ಸಪ್ತಮ: ಸಪ್ತಮಭಾವವು ಪ್ರಯಾಣ, ವ್ಯಾಪಾರ, ಜೂಜು, ಅಭಿಲಾಷೆ, ಯುದ್ಧ, ಸಂಘ, ಕಾಮ, ಪ್ರೇಮ, ಪತ್ನಿ ಯಾ ಪತಿ, ಪಾಲುವ್ಯಾಪಾರ, ಮಾರಕ, ಮೂತ್ರಾಶಯ ಇತ್ಯಾದಿ ಸೂಚಿಸುತ್ತದೆ. ಇದನ್ನು ಕಳತ್ರಸ್ಥಾನ ಅಥವಾ ನಿವೃತ್ತಿಸ್ಥಾನ ಎಂದು ಕರೆಯುತ್ತಾರೆ.

ಅಷ್ಟಮ: ಅಷ್ಟಮಭಾವವು ಆಯುರ್ದಾಯ, ಋಣ, ಬಂಧನ. ಗುಹ್ಯಸ್ಥಾನ, ದಾನ, ಅನ್ನ, ಪರಾಭವ, ತುಚ್ಛೀಕಾರ, ಅಪವಾದ, ವಿಘ್ನ, ಗುಪ್ತ ವಿಚಾರಗಳು, ಮರಣಶಾಸನಧನ, ಮಾಂಗಲ್ಯ ರೋಗೋತ್ಪತ್ತಿ, ನೋವು,

ಅಪಘಾತ, ಮರಣ ಇತ್ಯಾದಿ ಸೂಚಿಸುತ್ತದೆ. ಇವನ್ನು ರಂಧ್ರಸ್ಥಾನ ಅಥವಾ ಆಯುಸ್ಥಾನ ಎಂದು ಕರೆಯುತ್ತಾರೆ.

**ನವಮ :** ನವಮ ಭಾವವು ಭಾಗ್ಯ, ಸಂಪತ್ತು, ದೇವತಾರಾಧನೆ, ಗುರು, ತಂದೆ, ತೀರ್ಥಯಾತ್ರೆ, ಶುಭ, ಪೂಜೆ, ಭಾಗ್ಯಪ್ರಾಪ್ತಿ, ಅಧಿದೇವತೆ, ತಪಸ್ಸು, ಸುಕೃತ, ಪಿತೃ, ಪುಣ್ಯ ಜಪ, ಧರ್ಮ, ವಂಶ, ಮೊಮ್ಮಗ, ದೂರ ಪ್ರಯಾಣ, ತೊಡೆಗಳು, ಇತ್ಯಾದಿ ಸೂಚಿಸುತ್ತದೆ. ಇದನ್ನು ಲಕ್ಷ್ಮೀಸ್ಥಾನ, ಅಥವಾ ಭಾಗ್ಯಸ್ಥಾನ ಎಂದು ಕರೆಯುತ್ತಾರೆ.

**ದಶಮ :** ಕರ್ಮ, ವೃತ್ತಿ, ವ್ಯಾಪಾರ, ಸಂಪಾದನೆ, ಜೀವನೋಪಾಯ, ಸ್ಥಾನ, ಮಾನ, ಗೌರವ, ಕೀರ್ತಿ, ಉನ್ನತಿ, ಪದವಿ, ಧರ್ಮ, ದರ್ಜೆ, ಜಯ, ಯಜ್ಞ, ಜೀವನ, ಆಕಾಶ, ಆಚಾರ, ಗುಣ, ಆಜ್ಞೆ, ಜಾನುಯುಗಳ, ರಾಜ್ಯ ಪ್ರಾಪ್ತಿ, ಇತ್ಯಾದಿ ಸೂಚಿಸುತ್ತದೆ. ಇದನ್ನು ವಿಷ್ಣುಸ್ಥಾನ ಅಥವಾ ಕರ್ಮ ಸ್ಥಾನ ಎಂದು ಕರೆಯುತ್ತಾರೆ.

**ಏಕಾದಶ :** ಲಾಭ, ಸಂಪತ್ತು, ಪ್ರಾಪ್ತಿ, ಆದಾಯ, ಶ್ಲಾಘ್ಯತೆ, ಎಡ ಕಿವಿ, ಉತ್ತಮ ವಾರ್ತೆ, ಹಿರಿಯ ಸಹೋದರರು ಜಯ, ಶತ್ರುಗಳ ಪರಾಭವ, ವಾಹನ ಪ್ರಾಪ್ತಿ, ಕಿಗ್ಗಾಲು, ಭೂಷಣ ಇತ್ಯಾದಿ ಸೂಚಿಸುತ್ತದೆ. ಇದನ್ನು ಜ್ಯೇಷ್ಠಭ್ರಾತೃಸ್ಥಾನ ಅಥವಾ ಲಾಭಸ್ಥಾನ ಎಂದು ಕರೆಯುತ್ತಾರೆ.

**ದ್ವಾದಶ :** ನಷ್ಟ, ವ್ಯಯ, ಖರ್ಚು, ಶಿಕ್ಷೆ, ದಂಡ, ಮೋಕ್ಷ, ದುಃಖ, ಕೊನೆ, ನಿದ್ರೆ, ಶಯನ, ಬಂಧನ, ಕಾಲು, ಎಡಕಣ್ಣು, ದೇವತಾ ಉಪಾಸನೆ ಇತ್ಯಾದಿ ಸೂಚಿಸುತ್ತದೆ. ಇದನ್ನು ಮೋಕ್ಷಸ್ಥಾನ ಅಥವಾ ವ್ಯಯಸ್ಥಾನ ಎಂದು ಕರೆಯುತ್ತಾರೆ.

ಭಾವಫಲ ಚಿಂತನೆಯಲ್ಲಿ ಭಾವಾಧಿಪತಿಯು ಭಾವಸ್ಥಿತನಾದರೆ, ಅಥವಾ ಭಾವವನ್ನು ನೋಡಿದರೆ, ಶುಭದೃಷ್ಟ ಅಥವಾ ಶುಭಯುತನಾದರೆ, ಬಲಿಷ್ಠ ನಾದರೆ, ಭಾವಫಲ ಶುಭ ಹಾಗೂ ಪುಷ್ಟ ಆಗುತ್ತದೆ. ಭಾವಾಧಿಪತಿಯು ಬಲಹೀನ, ದುಸ್ಥಾನಗತ, ಪಾಪದೃಷ್ಟ ಅಥವಾ ಪಾಪಯುತ, ಅಸ್ತಂಗತನಾದರೆ ಅಶುಭಫಲಗಳನ್ನು ನೀಡುತ್ತಾನೆ.

# ೧೮. ಕಾಲಪುರುಷನ ಅಂಗಗಳು

ಹೋರಾಶಾಸ್ತ್ರದಲ್ಲಿ ಕಾಲವನ್ನು ಕಾಲಪುರುಷ ಎಂದು ನಿರ್ಣಯಿಸಿ ದ್ವಾದಶ ರಾಶಿಗಳಲ್ಲಿ ಅವನ ಅಂಗಾಂಗಗಳನ್ನು ವಿಭಾಗಿಸಿರುತ್ತಾರೆ. 1. ಮೇಷ ರಾಶಿಯು ಕಾಲಪುರುಷನ ಶಿರಸ್ಸು ಆಗಿರುತ್ತದೆ. 2. ವೃಷಭವು ಮುಖ, 3. ಮಿಥುನವು ವಕ್ಷಸ್ಥಳ. 4. ಕರ್ಕಟಕವು ಹೃದಯ, 5. ಸಿಂಹವು ಉದರ. 6. ಕನ್ಯೆಯು ನಾಭಿಯ ಕೆಳಭಾಗ, 7. ತುಲೆಯು ಮೂತ್ರಪಿಂಡಗಳು, 8. ವೃಶ್ಚಿಕವು ಜನನೇಂದ್ರಿಯ ಮತ್ತು ಗುದ 9. ಧನವು ತೊಡೆಗಳು, 10. ಮಕರವು ಮೊಣಕಾಲು, 11. ಕುಂಭವು ಕಿಗ್ಗಾಲುಗಳ ಮೀನಖಂಡ, 12. ಮೀನವು ಕಾಲಪುರುಷನ ಪಾದಗಳು, ಇದು ನೈಸರ್ಗಿಕ ಅಂಗ ವಿಭಾಗ ಆಗಿರುತ್ತದೆ.

ಜನನ ಜಾತಕದಲ್ಲಿ ಪ್ರಥಮ ಭಾವವಾದ ಜನ್ಮಲಗ್ನವು ಶಿರಸ್ಸು ಆಗಿರುತ್ತದೆ. ಅನಂತರ ಉಳಿದ ಭಾವಗಳು ಅನುಕ್ರಮವಾಗಿ ಮೇಲೆ ಹೇಳಿದ ಅಂಗಗಳನ್ನು ಸೂಚಿಸುತ್ತದೆ. ಜನನಕಾಲದಲ್ಲಿ ಪಾಪಗ್ರಹರಿಂದ ಪೀಡಿತರಾಶಿಯು ಕಾಲಪುರುಷನು ಸೂಚಿಸುವ ಅಂಗವಿಭಾಗದಲ್ಲಿ ಜಾತಕನಿಗೆ ದೋಷ ಉಂಟಾಗಬಹುದು. ಅಥವಾ ಜಾತಕನ ಜನ್ಮಲಗ್ನದಿಂದ ಪಾಪಗ್ರಹರು ಸ್ಥಿತ ಭಾವಕ್ಕೆ ಸಂಭಂದಿಸಿದ ಅಂಗಗಳಲ್ಲಿ ನ್ಯೂನ್ಯತೆ ಅಥವಾ ಹಾನಿ ಉಂಟಾಗುತ್ತದೆ. ಸೌಮ್ಯಗ್ರಹಸ್ಥಿತ ಭಾವಸೂಚಿಸುವ ಅಂಗವಿಭಾಗದಲ್ಲಿ ಪುಷ್ಟಿ ಉಂಟಾಗುತ್ತದೆ.

1. ರವಿಯು ಕಾಲಪುರುಷನ ಆತ್ಮಕಾರಕನು ಅಂದರೆ ಜೀವಾತ್ಮನು, ಆಗಿರುತ್ತಾನೆ. ಮತ್ತು ಅಂತಃಕರಣವನ್ನು ಸೂಚಿಸುತ್ತಾನೆ. 2. ಚಂದ್ರನು ಮನೋಕಾರಕನು ಮತ್ತು ಮನಸ್ಸನ್ನು ಸೂಚಿಸುತ್ತಾನೆ. 3. ಕುಜನು ಸತ್ವಕಾರಕನು ಮತ್ತು ಪರಾಕ್ರಮ ಸೂಚಕನು ಆಗಿರುತ್ತಾನೆ. 4. ಬುಧನು ವಾಕ್‌ಶಕ್ತಿಯ ಸೂಚಕನು. 5. ಗುರುವುಜ್ಞಾನಕಾರಕನು ಮತ್ತು ಆಧ್ಯಾತ್ಮಿಕ ಸುಖಕಾರಕನು ಆಗಿರುತ್ತಾನೆ. 6. ಶುಕ್ರನು ಜ್ಞಾನಕಾರಕನು ಮತ್ತು ಲೌಕಿಕ ಸುಖಕಾರಕನು ಆಗಿರುತ್ತಾನೆ, 7. ಶನಿಯುದುಃಖಕಾರಕನು ಮತ್ತು ಮರಣಕಾರಕನು ಆಗಿರುತ್ತಾನ.

# ೧೯. ದ್ರೇಕ್ಕಾಣ ಹೇತುವಿನಿಂದ ಅಂಗವಿಭಾಗ

ಕಾಲಪುರುಷನ ಶರೀರವನ್ನು ಮೂರುಪಾಲು ಮಾಡಿರುತ್ತಾರೆ. ಶಿರಸಿನಿಂದ ಮುಖದವರೆಗೆ ಇರುವ ಭಾಗವನ್ನು ಪ್ರಥಮ ದ್ರೇಕ್ಕಾಣವು ಸೂಚಿಸುತ್ತದೆ. ಕಂಠದಿಂದ ನಾಭಿಯವರೆಗೆ ಇರುವ ಭಾಗವನ್ನು ದ್ವಿತೀಯ ದ್ರೇಕ್ಕಾಣವು ಸೂಚಿಸುತ್ತದೆ. ಬಸ್ತಿಯಿಂದ ಪಾದದ ವರೆಗೆ ಇರುವ ಭಾಗವನ್ನು ತೃತೀಯ ದ್ರೇಕ್ಕಾಣವು ಸೂಚಿಸುತ್ತದೆ.

ದೃಶ್ಯಾರ್ಧ ರಾಶಿಗಳಲ್ಲಿ ಇರುವ ಗ್ರಹರು ಎಡಭಾಗವನ್ನು ಅದೃಶ್ಯಾರ್ಧ ರಾಶಿಗಳಲ್ಲಿರುವ ಗ್ರಹರು ಬಲಭಾಗವನ್ನು ಸೂಚಿಸುತ್ತಾರೆ.

ಪ್ರಥಮ ದ್ರೇಕ್ಕಾಣದಲ್ಲಿ ಲಗ್ನದ ಉದಿತಭಾಗವು ಶಿರಸ್ಸಿನ ಎಡಭಾಗ, ಅನುದಿತಭಾಗವು ಶಿರಸ್ಸಿನ ಬಲಭಾಗವನ್ನು ಸೂಚಿಸುತ್ತದೆ. ದ್ವಿತೀಯವು ಬಲಕಣ್ಣು ಮತ್ತು ದ್ವಾದಶವು ಎಡಕಣ್ಣನ್ನು ಸೂಚಿಸುತ್ತದೆ. ತೃತೀಯವು ಬಲಕಿವಿ ಮತ್ತು ಏಕಾದಶವು ಎಡಕಿವಿಯನ್ನು ಸೂಚಿಸುತ್ತದೆ. ಚತುರ್ಥವು ಮೂಗಿನ ಬಲಭಾಗ ಮತ್ತು ದಶಮವು ಮೂಗಿನ ಎಡಭಾಗವನ್ನು ಸೂಚಿಸುತ್ತದೆ. ಪಂಚಮವು ಬಲಕೆನ್ನೆ ಮತ್ತು ನವಮವು ಎಡಕೆನ್ನೆಯನ್ನು ಸೂಚಿಸುತ್ತದೆ. ಷಷ್ಠವು ಬಲದವಡೆ ಮತ್ತು ಅಷ್ಟಮವು ಎಡದವಡೆಯನ್ನು ಸೂಚಿಸುತ್ತದೆ. ಸಪ್ತಮ ಭಾವದ ಅನುದಿತಾಂಶವು ಬಾಯಿಯ ಬಲಭಾಗ ಮತ್ತು ಉದಿತಾಂಶವು ಬಾಯಿಯ ಎಡಭಾಗವನ್ನು ಸೂಚಿಸುತ್ತದೆ.

ದ್ವಿತೀಯ ದ್ರೇಕ್ಕಾಣದಲ್ಲಿ ಲಗ್ನದ ಅನುದಿತಾಂಶವು ಕುತ್ತಿಗೆಯ ಬಲಭಾಗವನ್ನು ಮತ್ತು ಉದಿತಾಂಶವು ಕುತ್ತಿಗೆಯ ಎಡಭಾಗವನ್ನು ಸೂಚಿಸುತ್ತದೆ. ದ್ವಿತೀಯವು ಬಲಭುಜ ಮತ್ತು ದ್ವಾದಶವು ಎಡಭುಜವನ್ನು ಸೂಚಿಸುತ್ತದೆ. ತೃತೀಯವು ಬಲಬಾಹು, ಮತ್ತು ಏಕಾದಶವು ಎಡಬಾಹುವನ್ನು ಸೂಚಿಸುತ್ತದೆ. ಚತುರ್ಥವು ಬಲಪಕ್ಕೆ ಮತ್ತು ದಶಮವು ಎಡಪಕ್ಕೆಯನ್ನು ಸೂಚಿಸುತ್ತದೆ. ಪಂಚಮವು ಹೃದಯದ ಬಲಭಾಗ ಮತ್ತು ನವಮವು ಹೃದಯದ ಎಡಭಾಗವನ್ನು ಸೂಚಿಸುತ್ತದೆ. ಷಷ್ಠವು ಉದರದ ಬಲಭಾಗ ಮತ್ತು ಅಷ್ಟಮವು ಉದರದ ಎಡಭಾಗವನ್ನು ಸೂಚಿಸುತ್ತದೆ. ಸಪ್ತಮಭಾವದ ಅನುದಿತಾಂಶವು ನಾಭಿಯ ಬಲಭಾಗ ಮತ್ತು ಉದಿತಾಂಶವು ನಾಭಿಯ ಎಡಭಾಗವನ್ನು ಸೂಚಿಸುತ್ತದೆ.

ತೃತೀಯ ದ್ರೇಕ್ಕಾಣದಲ್ಲಿ ಲಗ್ನದ ಅನುದಿತಾಂಶವು ಬಸ್ತಿಯ (ನಾಭಿಯ ಕೆಳಭಾಗ) ಬಲಭಾಗವನ್ನು ಉದಿತಾಂಶವು ಬಸ್ತಿಯ ಎಡಭಾಗವನ್ನು ಸೂಚಿಸುತ್ತದೆ. ದ್ವಿತೀಯವು ಶಿಶ್ನ ಮತ್ತು ಗುದದ ಬಲಭಾಗ ಮತ್ತು ದ್ವಾದಶವು ಶಿಶ್ನ ಮತ್ತು ಗುದದ ಎಡಭಾಗವನ್ನು, ತೃತೀಯವು ವೃಷಣದ ಬಲಮಣಿಯನ್ನು ಏಕಾದಶವು ವೃಷಣದ ಎಡಮಣಿಯನ್ನು, ಚತುರ್ಥವು ಬಲತೊಡೆಯನ್ನು ಮತ್ತು ದಶಮವು ಎಡತೊಡೆಯನ್ನು, ಪಂಚಮವು ಬಲ ಮೊಣಕಾಲನ್ನು ಮತ್ತು ನವಮವು ಎಡಮೊಣಕಾಲನ್ನು, ಷಷ್ಠವು ಬಲಕಾಲನ್ನು ಅಷ್ಟಮವು ಎಡಕಾಲನ್ನು, ಸಪ್ತಮಭಾವದ ಅನುದಿತಾಂಶವು ಬಲಪಾದವನ್ನು ಉದಿತಾಂಶವು ಎಡಪಾದವನ್ನು ಸೂಚಿಸುತ್ತದೆ.

(1) ರಾಶಿಯ ಪ್ರಥಮ ದ್ರೇಕ್ಕಾಣದಲ್ಲಿ ಜನಿಸಿದವರಿಗೆ ಪ್ರತಿಯೊಂದು ರಾಶಿಯ ಪ್ರಥಮ ದ್ರೇಕ್ಕಾಣವು ಶಿರೋಭಾಗದಿಂದ ಮುಖಪರ್ಯಂತ್ರದ ಅವಯವಗಳನ್ನು ಅನುಕ್ರಮವಾಗಿ ಸೂಚಿಸುತ್ತದೆ. ಪ್ರತಿಯೊಂದು ರಾಶಿಯ ದ್ವಿತೀಯ ದ್ರೇಕ್ಕಾಣವು ಕಂಠದಿಂದ, ನಾಭಿಪರ್ಯಂತ್ರದ ಅವಯವಗಳನ್ನು ಅನುಕ್ರಮವಾಗಿ ಸೂಚಿಸುತ್ತದೆ. ಪ್ರತಿಯೊಂದು ರಾಶಿಯ ತೃತೀಯ ದ್ರೇಕ್ಕಾಣವು ಬಸ್ತಿಯಿಂದ ಪಾದದ ವರೆಗಿನ ಅವಯವಗಳನ್ನು ಅನುಕ್ರಮವಾಗಿ ಸೂಚಿಸುತ್ತದೆ.

(2) ರಾಶಿಯ ದ್ವಿತೀಯ ದ್ರೇಕ್ಕಾಣದಲ್ಲಿ ಜನಿಸಿದವರಿಗೆ ಪ್ರತಿ ಒಂದು ರಾಶಿಯ ದ್ವಿತೀಯ ದ್ರೇಕ್ಕಾಣವು ಶಿರೋಭಾಗದಿಂದ ಮುಖಪರ್ಯಂತ್ರದ ಅವಯವಗಳನ್ನು ಪ್ರತಿಯೊಂದು ರಾಶಿಯ ತೃತೀಯ ದ್ರೇಕ್ಕಾಣವು ಕಂಠಭಾಗದಿಂದ ನಾಭಿಯ ವರೆಗಿನ ಅವಯವಗಳನ್ನು, ಪ್ರತಿಯೊಂದು ರಾಶಿಯ ಪ್ರಥಮ ದ್ರೇಕ್ಕಾಣವು ಬಸ್ತಿಭಾಗದಿಂದ ಪಾದದವರೆಗಿನ ಅವಯವಗಳನ್ನು ಅನುಕ್ರಮವಾಗಿ ಸೂಚಿಸುತ್ತದೆ.

(3) ರಾಶಿಯ ತೃತೀಯ ದ್ರೇಕ್ಕಾಣದಲ್ಲಿ ಜನಿಸಿದವರಿಗೆ ಪ್ರತಿಯೊಂದು ರಾಶಿಯ ತೃತೀಯ ದ್ರೇಕ್ಕಾಣವು ಶಿರೋಭಾಗದಿಂದ ಮುಖದ ವರೆಗಿನ ಅವಯವಗಳನ್ನು ಪ್ರತಿಯೊಂದು ರಾಶಿಯ ಪ್ರಥಮ ದ್ರೇಕ್ಕಾಣವು ಕಂಠಭಾಗದಿಂದ ನಾಭಿವರೆಗಿನ ಅವಯವಗಳನ್ನು, ಪ್ರತಿಯೊಂದು ರಾಶಿಯ ದ್ವಿತೀಯ ದ್ರೇಕ್ಕಾ

ಣವು ಬಸ್ತಿ ಭಾಗದಿಂದ ಪಾದದ ವರೆಗಿನ ಅವಯುವಗಳನ್ನು ಅನುಕ್ರಮವಾಗಿ ಸೂಚಿಸುತ್ತದೆ.

ದ್ರೇಕ್ಕಾಣಸ್ಥಿತ ಪಾಪಗ್ರಹರು ಅಥವಾ ದೂಶಿತಗ್ರಹರು ಮೇಲಿನ ನಿಯುಮ ದಂತೆ ಅನುಗುಣವಾದ ಅಂಗ ವಿಭಾಗದಲ್ಲಿ ವ್ರಣ ಅಥವಾ ರೋಗಾದಿಗಳನ್ನು ತಮ್ಮ ದಶಾಭುಕ್ತಿಕಾಲದಲ್ಲಿ ನೀಡುತ್ತಾರೆ. ಶುಭಗ್ರಹರಿಂದ ನೋಡಲ್ಪಟ್ಟರೆ ಅನುಗುಣವಾದ ಅಂಗ ವಿಭಾಗದಲ್ಲಿ ಜನನಕಾಲದಲ್ಲಿ ತಿಲ, ಮಚ್ಚೆ ಇತ್ಯಾದಿ ಚಿಹ್ನೆಗಳು ಇರಬಹುದು.

## ೨೦. ಲಗ್ನಫಲ

ಜನನ ಕಾಲದಲ್ಲಿ ಭೂಮಿಗೆ ಸಮಾನಾಂತರವಾಗಿ ಉದಯ ಆಗುವ ರಾಶಿಯು ಜನ್ಮಲಗ್ನ ಆಗಿರುತ್ತದೆ. ಲಗ್ನಾಧಿಪತಿ, ಗುರು ಅಥವಾ ಬುಧರು ಲಗ್ನವನ್ನು ನೋಡಿದರೆ ಅಥವಾ ಲಗ್ನದಲ್ಲಿ ಇದ್ದರೆ ಲಗ್ನವು ಬಲಿಷ್ಠ ಆಗುತ್ತದೆ. ಪಾಪಗ್ರಹರ ದೃಷ್ಟಿ ಅಥವಾ ಯೋಗದಿಂದ ಲಗ್ನವು ಬಲಹೀನ ಆಗುತ್ತದೆ.

**ಮೇಷಲಗ್ನ :** ಮೇಷಲಗ್ನದಲ್ಲಿ ಹುಟ್ಟಿದವನು ಉರುಟಾದ ಕಣ್ಣುಗಳು ಉಳ್ಳವನು, ಸೊಂಟದ ಕೆಳಗೆ ಬಲ ಇಲ್ಲದವನು, ಉಗ್ರಸ್ವಭಾವದವನು ನೀರನ್ನು ಕಂಡರೆ ಹೆದರುವವನು, ಅಲ್ಪ ಆಹಾರ ಸೇವಿಸುವವನು, ಕಾಮುಕನು, ಸಂಚಾರ ದಲ್ಲಿ ಆಸಕ್ತಿ ಉಳ್ಳವನು, ಚಪಲತೆ ಉಳ್ಳವನು ಅಸತ್ಯವನ್ನು ಮಾತಾಡುವವನು, ಅಂಗ ವೈಕಲ್ಯ ಉಳ್ಳವನು ಆಗುತ್ತಾನೆ.

**ವೃಷಭಲಗ್ನ :** ವೃಷಭಲಗ್ನದಲ್ಲಿ ಹುಟ್ಟಿದವನು ಕೃಷಿವಲನು, ಸ್ತ್ರೀ ಲೋಲನು, ತ್ಯಾಗವಂತನು, ದಯೆಉಳ್ಳವನು, ಕಷ್ಟಸಹಿಷ್ಣುವು, ಪಶುಪಾಲಕನು, ಬೆನ್ನಿನಲ್ಲಿ, ಮುಖದಲ್ಲಿ ಕಲೆಗಳು ಉಳ್ಳವನು ಪರಕಾರ್ಯಗಳನ್ನು ಮಾಡು ವವನು ಜೀವಿತದ ಮಧ್ಯ ಮತ್ತು ಅಂತ್ಯಕಾಲದಲ್ಲಿ ಸುಖವಂತನು ಆಗುತ್ತಾನೆ.

**ಮಿಥುನಲಗ್ನ :** ಮಿಥುನಲಗ್ನದಲ್ಲಿ ಹುಟ್ಟಿದವನು ಶ್ಯಾಮಲ ವರ್ಣದ ಕಣ್ಣುಗಳು ಉಳ್ಳವನು, ಸುರುಳಿಯಾದ ಗುಂಗುರು ಕೂದಲು ಉಳ್ಳವನು, ರತಿಕ್ರೀಡೆಯಲ್ಲಿ ಆಸಕ್ತಿ ಉಳ್ಳವನು, ಕುಶಲನು, ಅಭಿಮಾನ ಉಳ್ಳವನು, ನೃತ್ಯ, ಗೀತಗಳಲ್ಲಿ ಪ್ರೀತಿ ಉಳ್ಳವನು, ಉತ್ತಮ ಅಂತಃಕರಣ ಉಳ್ಳವನು ಆಗುತ್ತಾನೆ.

ಕರ್ಕಟಕಲಗ್ನ: ಕರ್ಕಟಕಲಗ್ನದಲ್ಲಿ ಹುಟ್ಟಿದವನು ಸ್ತ್ರೀಯಿಂದ ತ್ಯಜಿಸಲ್ಪಟ್ಟವನು, ಅಗಲವಾದ ಕುತ್ತಿಗೆ ಮತ್ತು ಎತ್ತರವಾದ ಸೊಂಟ ಉಳ್ಳವನು, ತುಂಬಾ ಮಿತ್ರರು ಮತ್ತು ಹೆಚ್ಚು ಮನೆ ಉಳ್ಳವನು, ಧನಿಕನು, ಪ್ರಮುಖನು, ಸಣ್ಣ ಆಕೃತಿಯುವನು, ಕುತಂತ್ರ ಸ್ವಭಾವದವನು, ನೀರನ್ನು ಮೆಚ್ಚುವವನು, ಅಲ್ಪಸಂತಾನ ಉಳ್ಳವನು, ಮೇಧಾವಿಯು ಆಗುತ್ತಾನೆ.

ಸಿಂಹಲಗ್ನ: ಸಿಂಹಲಗ್ನದಲ್ಲಿ ಜನಿಸಿದವನು ಅಗಲವಾದ ಮುಖ ಉಳ್ಳವನು, ಅಭಿಮಾನಿಯು ಪರಾಕ್ರಮ ಉಳ್ಳವನು, ಕಾಡು, ವನ, ನಿರ್ಜನಪ್ರದೇಶ ಸಂಚಾರಗಳಲ್ಲಿ ಪ್ರೀತಿ ಉಳ್ಳವನು, ಮಾತೃಸುಖ ಉಳ್ಳವನು, ಹಿಡಿದ ಕಾರ್ಯಗಳನ್ನು ಬಿಡದೆ ಸಾಧಿಸುವವನು, ಸ್ಥಿರವಾದ ಬುದ್ಧಿ ಉಳ್ಳವನು ಆಗುತ್ತಾನೆ.

ಕನ್ಯಾಲಗ್ನ: ಕನ್ಯಾಲಗ್ನದಲ್ಲಿ ಹುಟ್ಟಿದವನು ಉತ್ತಮ ಪ್ರಿಯವಾದ ಮಾತುಗಳನ್ನು ಆಡುವವನು, ಸತ್ಯವಂತನು, ರತಿಕ್ರೀಡೆಯಲ್ಲಿ ಆಸಕ್ತಿ ಉಳ್ಳವನು, ಅಲ್ಪಸಂತತಿ ಉಳ್ಳವನು, ಶಾಸ್ತ್ರಗಳನ್ನು ಬಲ್ಲವನು, ಬುದ್ಧಿವಂತನು, ಪರಸಂಪತ್ತಿನಿಂದ ಮೆರೆಯುವವನು ಮತ್ತು ಪರರಿಂದ ಸನ್ಮಾನಿಸಲ್ಪಡುವವನು ಆಗುತ್ತಾನೆ.

ತುಲಾಲಗ್ನ: ತುಲಾಲಗ್ನದಲ್ಲಿ ಹುಟ್ಟಿದವನು ಎತ್ತರವಾಗಿ ಕ್ಷೀಣದೇಹ ಉಳ್ಳವನು, ಅಲ್ಪಸಂತತಿ ಉಳ್ಳವನು, ದೇವ-ಬ್ರಾಹ್ಮಣರಲ್ಲಿ ಭಕ್ತಿ ಉಳ್ಳವನು, ಸುಚಾರದಲ್ಲಿ ಆಸಕ್ತಿ ಉಳ್ಳವನು, ಪ್ರಸಿದ್ಧಿ ಹೊಂದಿದವನು, ವ್ಯಾಪಾರ ವ್ಯವಹಾರದಲ್ಲಿ ಚಾಣಾಕ್ಷನು, ಧೈರ್ಯವಂತನು ಮತ್ತು ನ್ಯಾಯವಂತನು ಆಗುತ್ತಾನೆ.

ವೃಶ್ಚಿಕಲಗ್ನ: ವೃಶ್ಚಿಕಲಗ್ನದಲ್ಲಿ ಹುಟ್ಟಿದವನು ಬಾಲ್ಯಕಾಲದಲ್ಲಿ ವ್ಯಾಧಿಗಳಿಂದ ಪೀಡಿತನು, ಗುರುಹಿರಿಯರಿಂದ ಪರಿತ್ಯಕ್ತನು, ಕ್ರೂರಕರ್ಮಗಳಲ್ಲಿ ಆಸಕ್ತಿ ಉಳ್ಳವನು. ರಾಜರಿಂದ ಅಥವಾ ಸರಕಾರದಿಂದ ಮಾನಸನ್ಮಾನ ಪಡೆಯುವವನು ಅಗಲವಾದ ಎದೆ ಮತ್ತು ಕೈಕಾಲುಗಳಲ್ಲಿ ಚಿಹ್ನೆ ಉಳ್ಳವನು ಮತ್ತು ಧೈರ್ಯವಂತನು ಆಗುತ್ತಾನೆ.

ಧನುರ್ಲಗ್ನ: ಧನುರ್ಲಗ್ನದಲ್ಲಿ ಹುಟ್ಟಿದವನು ಬಲಾಢ್ಯನು, ಉದ್ದವಾದ ಕುತ್ತಿಗೆ, ಅಗಲವಾದ ಕಿವಿ, ಮೂಗು ಮತ್ತು ಮುಖ ಉಳ್ಳವನು, ಗಿಡ್ಡ ಪ್ರಕೃತಿಯವನು, ಸದಾಕರ್ಮನಿರತನು, ಸಮಾಜದಲ್ಲಿ ಮಾನ್ಯತೆ ಉಳ್ಳವನು, ಉದಾರನು, ಶತ್ರುಗಳನ್ನು ನಾಶಮಾಡುವವನು, ದಯಾವಂತನು ಆಗುತ್ತಾನೆ.

ಮಕರಲಗ್ನ : ಮಕರಲಗ್ನದಲ್ಲಿ ಹುಟ್ಟಿದವನು ಉದ್ದವಾದ ಕಾಲುಗಳು ಉಳ್ಳವನು ವೀರ್ಯವಂತನು, ಆಲಸಿಯು, ಕೊಟ್ಟವಾಕ್ಯದಂತೆ ನಡೆಯುವವನು, ವೃದ್ಧನು. ಅಂತ್ಯಜನು, ಸ್ತ್ರೀಲೋಲನು, ಭಾಗ್ಯವಂತನು, ಪ್ರವಾಸದಲ್ಲಿ ಆಸಕ್ತಿ ಉಳ್ಳವನು ವಾತಪ್ರಕೃತಿಯವನು ಆಗುತ್ತಾನೆ.

ಕುಂಭಲಗ್ನ : ಕುಂಭಲಗ್ನದಲ್ಲಿ ಹುಟ್ಟಿದವನು ಗುಪ್ತವಾದ ಪಾಪಕಾರ್ಯಗಳಲ್ಲಿ ನಿರತನು. ವೃತ್ತಾಕಾರವಾದ ದೇಹ ಉಳ್ಳವನು. ಪರರನ್ನು ಪೀಡಿಸುವವನು. ಪ್ರವಾಸಿಯು. ಅಲ್ಪಧನ ಸಂಪತ್ತು ಉಳ್ಳವನು, ಲೋಭಿಯು ಪರದ್ರವ್ಯದಲ್ಲಿ ಆಸಕ್ತಿ ಉಳ್ಳವನು. ವೃದ್ಧಿಕ್ಷಯ ಸಂಪತ್ತು ಉಳ್ಳವನು, ಸುಗಂಧ ದ್ರವ್ಯಗಳಲ್ಲಿ ಪ್ರೀತಿ ಉಳ್ಳವನು ಆಗುತ್ತಾನೆ.

ಮೀನಲಗ್ನ : ಮೀನಲಗ್ನದಲ್ಲಿ ಹುಟ್ಟಿದವನು ಸಮಕಟ್ಟಾದ ಹೊಳಪುಳ್ಳ ದೇಹ ಉಳ್ಳವನು. ಸದಾ ಪತ್ನಿಯಲ್ಲಿ ಆಸಕ್ತಿ ಉಳ್ಳವನು, ಜಲಸಂಬಂಧ ವ್ಯಾಪಾರದಿಂದ ಧನ-ಸಂಪತ್ತನ್ನು ಗಳಿಸುವವನು. ವಿದ್ಯಾವಂತನು, ಕೃತಜ್ಞನು, ಶತ್ರುಗಳನ್ನು ಜಯಿಸಿದವನು, ಶುಭದೃಷ್ಟಿ ಉಳ್ಳವನು ಮತ್ತು ಭಾಗ್ಯವಂತನು ಆಗುತ್ತಾನೆ.

ಲಗ್ನಾಧಿಪತಿ. ಅಥವಾ ಶುಭಗ್ರಹರು ಲಗ್ನದಲ್ಲಿದ್ದರೆ ಅಥವಾ ಲಗ್ನವನ್ನು ನೋಡಿದರೆ ಮೇಲೆಹೇಳಿದ ಶುಭಫಲಗಳು ಪುಷ್ಟವಾಗುತ್ತದೆ. ಪಾಪಗ್ರಹರ ದೃಷ್ಟಿ ಅಥವಾ ಯೋಗದಿಂದ ಅಶುಭಫಲ ಪುಷ್ಟ ಆಗುತ್ತದೆ.

## ೨೧. ಭಾವಸ್ಥಿತ ಗ್ರಹಫಲ

### ಲಗ್ನಭಾವಫಲ – ಭಾವಕಾರಕ= ರವಿ

ಸೂರ್ಯ : ಸೂರ್ಯನು ವೃಷಭ, ಮಿಥುನ, ಕನ್ಯಾ, ವೃಶ್ಚಿಕದಿಂದ ಮೀನಲಗ್ನದ ವರೆಗೆ ಲಗ್ನದಲ್ಲಿ ಇದ್ದರೆ ಜಾತಕನು ಶೂರನು. ಆದರೆ ನಿಧಾನವಾಗಿ ಕಾರ್ಯಗಳನ್ನು ನಿರ್ಣಯಿಸುವವನು. ದೃಷ್ಟಿದೋಷ ಉಳ್ಳವನು, ನಿರ್ದಯಿಯು ಆಗುತ್ತಾನೆ. ಸೂರ್ಯನು ಮೇಷಲಗ್ನದಲ್ಲಿ ಇದ್ದರೆ, ಸ್ವಾರ್ಜಿತ ವಿತ್ತ ಉಳ್ಳವನು, ದೃಷ್ಟಿದೋಷ ಉಳ್ಳವನು ಆಗುತ್ತಾನೆ. ಸಿಂಹಲಗ್ನದಲ್ಲಿ ಸೂರ್ಯನಿದ್ದರೆ ರಾತ್ರಿ ಕುರುಡನು ಆಗುತ್ತಾನೆ. ತುಲಾಲಗ್ನದಲ್ಲಿ ಸೂರ್ಯ

ನಿದ್ದರೆ ಕುರುಡನು, ದರಿದ್ರನು ಆಗುತ್ತಾನೆ. ಕರ್ಕಟಕ ಲಗ್ನದಲ್ಲಿ ಸೂರ್ಯ ನಿದ್ದರೆ ದೋಷ ಉಳ್ಳ ಕಣ್ಣು ಉಳ್ಳವನು ಆಗುತ್ತಾನೆ. ಲಗ್ನದ ಸೂರ್ಯನಿಂದ ಪತ್ನಿ ಹಾಗೂ ದಾಯಾದಿಗಳಿಂದ ಮಾನಸಿಕ ಸಂತಾಪ ಲಭಿಸುತ್ತದೆ. ವಾತಪಿತ್ತ ದಿಂದ ಶಾರೀರಿಕ ಕಷ್ಟ ಉಂಟಾಗುತ್ತದೆ. ಆರ್ಥಿಕ ವಿರೀತ ಸಂಭವಿಸುತ್ತದೆ.

ಚಂದ್ರ : ಮೇಷಲಗ್ನದಲ್ಲಿ ಚಂದ್ರನಿದ್ದರೆ ಧನವಂತನು, ಹೆಚ್ಚು ಪುತ್ರ ಸಂತತಿ ಉಳ್ಳವನು, ಆಗುತ್ತಾನೆ. ವೃಷಭ ಮತ್ತು ಕರ್ಕಟಕ ಲಗ್ನದಲ್ಲಿ ಚಂದ್ರ ನಿದ್ದರೆ ಧನವಂತನು ಆಗುತ್ತಾನೆ. ಉಳಿದ ಲಗ್ನಗಳಲ್ಲಿ ಚಂದ್ರನಿದ್ದರೆ ಮಾತು ಬಾರದವನು, ಮೂಢನು, ಅಂಧನು, ಕಿವುಡನು, ಸೇವಕನು ಆಗುತ್ತಾನೆ.

ಕುಜ : ಕುಜನು ಲಗ್ನದಲ್ಲಿದ್ದರೆ ವ್ಯಸನ, ಕ್ರೋಧ, ಪಿತ್ತವಿಕಾರ, ಪರಸ್ತ್ರೀಯರಲ್ಲಿ ಆಸಕ್ತಿ, ಅಗ್ನಿಬಾಧೆ. ಗಾಯಗೊಂಡ ಶರೀರ ಉಳ್ಳವನು, ಕಣ್ಣು ಅಥವಾ ಶಿರೋವ್ಯಾಧಿಗಳಿಂದ ಪೀಡಿತನು ಆಗುತ್ತಾನೆ. ಫಲಪ್ರಾಪ್ತಿಕಾಲದಲ್ಲಿ ವಿಘ್ನ ಅಥವಾ ತಡೆ ಉಂಟಾಗುತ್ತದೆ.

ಬುಧ : ಬುಧನು ಲಗ್ನದಲ್ಲಿದ್ದರೆ ಬುದ್ಧಿವಂತನು, ಲೇಖಕ, ಕಾಂತಿ ಯುತ ಶರೀರ, ಗೂಢವಿದ್ಯೆ ಅಥವಾ ಮಂತ್ರವಿದ್ಯೆ ಬಲ್ಲವನು, ವಿದ್ಯಾವಂತನು. ಅನಾರೋಗ್ಯದಿಂದ ಬಳಲುವವನು ಆಗುತ್ತಾನೆ.

ಗುರು : ಗುರುವು ಲಗ್ನದಲ್ಲಿದ್ದರೆ, ವಿದ್ಯಾವಂತನು, ಸುಖವಂತನು, ಅಲ್ಪವೀರ್ಯ ಉಳ್ಳವನು, ಮತ್ತು ಉಪಭೋಗದಿಂದ ಧನವ್ಯಯ ಆಗುತ್ತದೆ. ಲಗ್ನದ ಗುರುವು ದೀರ್ಘಾಯುಷ್ಯ, ಸ್ಥಾನ-ಮಾನ, ಕೀರ್ತಿ ನೀಡುತ್ತಾನೆ.

ಶುಕ್ರ : ಶುಕ್ರನು ಲಗ್ನದಲ್ಲಿದ್ದರೆ ಕಾಂತಿಯುತ ಶರೀರ, ಸತ್ಸಂಗ, ಉತ್ತಮ ಸ್ತ್ರೀಸಂಗ, ರತಿಕ್ರೀಡೆಯಲ್ಲಿ ನಿಪುಣತೆ, ವ್ಯವಹಾರ ಕುಶಲತೆ, ಸುಖ, ಚತುರತೆ ಇತ್ಯಾದಿ ನೀಡುತ್ತಾನೆ.

ಶನಿ : ಮೇಷದಿಂದ ಕನ್ಯಾ ಮತ್ತು ವೃಶ್ಚಿಕ ಲಗ್ನದಲ್ಲಿ ಶನಿ ಇದ್ದವನು ಅಧಮನು, ರೋಗಿ, ಕಾಮುಕ, ಅತ್ಯಂತ ಮಲಿನನು, ಕೊಳಕು ವಸ್ತ್ರಧರಿಸುವವನು ಬಾಲ್ಯಕಾಲದಲ್ಲಿ ರೋಗಪೀಡಿತನು, ಆಲಸಿಯು, ಅವ್ಯಕ್ತಭಾಷಿಯು ಆಗು ತ್ತಾನೆ. ತುಲಾ, ಧನುವಿನಿಂದ ಮೀನ ಲಗ್ನದ ವರೆಗೆ ಶನಿ ಇದ್ದರೆ, ಉನ್ನತ ಅಧಿಕಾರದಲ್ಲಿ ಇರುವವನು, ನಗರಸಭಾಪತಿ, ವಿದ್ಯಾವಂತನು, ಸೌಂದರ್ಯ ವಂತನು, ಆಗುತ್ತಾನೆ, ಧನುರ್ಲಗ್ನದ ಶನಿಯು ರಾಜಯೋಗ ಕಾರಕನು ಆಗುತ್ತಾನೆ.

ರ್ಯವಂತನು, ಆಗುತ್ತಾನೆ. ಧನುರ್ಲಗ್ನದ ಶನಿಯು ರಾಜಯೋಗ ಕಾರಕನು ಆಗುತ್ತಾನೆ.

**ರಾಹು:** ಲಗ್ನದಲ್ಲಿ ರಾಹು ಇದ್ದವನು ಉದ್ದವಾದ ಶರೀರ ಉಳ್ಳವನು ಕಲಹಪ್ರಿಯನು, ವ್ಯಾಧಿಪೀಡಿತನು, ಕ್ರೂರ ಸ್ವಭಾವದವನು, ಅಭಿಮಾನಿ, ನಿರ್ದಯನು, ಅಧಾರ್ಮಿಕ ಪ್ರವೃತ್ತಿ ಉಳ್ಳವನು, ಮುಖರೋಗ, ಮಸ್ತಿಷ್ಕದ ವ್ಯಾಧಿಗಳು, ಚಂಚಲ ಸ್ವಭಾವ, ಧನಲಾಭ, ಮತ್ತು-ಶತ್ರುನಾಶ ಸಂಭವಿಸುತ್ತದೆ.

**ಕೇತು:** ಲಗ್ನದಲ್ಲಿ ಕೇತು ಇದ್ದವನು ಅಸತ್ಯವಾದಿ, ಕೃತಘ್ನನು, ದುಃಖಿತನು, ಕಲಹಸ್ವಭಾವದವನು, ಸ್ತ್ರೀನಾಶ ಅಥವಾ ಚಿಂತೆಯಿಂದ ಪೀಡಿತನು, ನಿಸ್ತೇಜನು ಪದಚ್ಯುತನಾದವನು, ಶಾರೀರಿಕ ವೈಕಲ್ಯ, ವಾತಪೀಡೆ, ವ್ಯಾಕುಲತೆ, ಕ್ಲೇಶ, ಉದ್ವೇಗ, ಭಯ, ಇತ್ಯಾದಿಗಳಿಂದ ಬಳಲುವವನು ಆಗುತ್ತಾನೆ.

## ೨೨. ದ್ವಿತೀಯ ಭಾವ ಫಲ. ಭಾವಕಾರಕ ಗುರು.

**ಸೂರ್ಯ:** ಸೂರ್ಯನು ದ್ವಿತೀಯದಲ್ಲಿ ಇದ್ದರೆ ಕುಟುಂಬ ಕಲಹ ಮತ್ತು ಕೋರ್ಟು ವ್ಯವಹಾರಗಳಿಂದ ಧನನಷ್ಟ ಸಂಭವಿಸುತ್ತದೆ. ಮುಖರೋಗ ಉಳ್ಳವನು, ಧನವಂತನು ಆಗುತ್ತಾರೆ. ಚತುಷ್ಪಾದ ಪ್ರಾಣಿಗಳನ್ನು ಪಡೆಯುತ್ತಾನೆ. ಸತ್ಕಾರ್ಯ-ಸದ್ವಿನಿಯೋಗ ಮಾಡುತ್ತಾನೆ. ಮಾತಿನಲ್ಲಿ ಘನಸ್ಥಿಕೆ, ಆತ್ಮಾಭಿಮಾನ ಇರುತ್ತದೆ.

**ಚಂದ್ರ:** ಚಂದ್ರನು ದ್ವಿತೀಯದಲ್ಲಿ ಇದ್ದರೆ ಉರುಟಾದ ಆಕರ್ಷಕ ಮುಖ, ಸವಿನುಡಿ, ಶರೀರಸೌಖ್ಯ, ದೊಡ್ಡಕುಟುಂಬ, ವಿಲಾಸಮಯ ಜೀವನ, ಧಾನ್ಯ ಲಾಭ, ಲಭಿಸುತ್ತದೆ.

**ಕುಜ:** ಕುಜನು ದ್ವಿತೀಯದಲ್ಲಿ ಇದ್ದರೆ, ಕುತ್ಸಿತಾನ್ನ ವಾದವಿವಾದಗಳಲ್ಲಿ ಪರಾಜಯ, ಮಾತಿನಲ್ಲಿ ತೀಕ್ಷ್ಣತೆ, ಕುಟುಂಬ ಕಲಹ, ಆರ್ಥಿಕ ಸಂಕಷ್ಟಗಳು, ಪ್ರವಾಸ, ಬೇಸಾಯ, ಅಥವಾ ತೋಟಗಾರಿಕೆ, ಭೂಲಾಭ, ಸ್ಥಿರವಸ್ತುಗಳನ್ನು ನೀಡುತ್ತಾನೆ.

ಬುಧ: ಬುಧನು ದ್ವಿತೀಯದಲ್ಲಿ ಇದ್ದರೆ ವಿದ್ಯಾವಂತನು, ಬುದ್ಧಿವಂತನು, ಧನವಂತನು, ಉದಾರನು, ಭಾಷಣದಲ್ಲಿ ಪರಿಣೀತನು, ಭೋಗವಂತನು ಆಗುತ್ತಾನೆ.

ಗುರು: ಗುರುವು ದ್ವಿತೀಯದಲ್ಲಿ ಇದ್ದರೆ ವಾಕ್‌ಚಾತುರ್ಯ, ಕವಿತಾಶಕ್ತಿ, ಪರಿಶ್ರಮದಿಂದ ಧನಪ್ರಾಪ್ತಿ, ಅಸ್ಥಿರಧನ, ಮುಖದೋಷ, ಮತ್ತು ಜ್ಞಾನದ ಪ್ರತಿಭೆ ನೀಡುತ್ತಾನೆ.

ಶುಕ್ರ: ಶುಕ್ರನು ದ್ವಿತೀಯದಲ್ಲಿ ಇದ್ದರೆ ಸೌಂದರ್ಯ, ಉತ್ತಮ ವಸ್ತ್ರ, ಆಹಾರ-ವಿಹಾರ, ದೇವತಾರಾಧನೆ, ಮಾತಿನಲ್ಲಿ ಬುದ್ಧಿವಂತಿಕೆ ಮತ್ತು ಚತುರತೆ ಇತ್ಯಾದಿ ನೀಡುತ್ತಾನೆ.

ಶನಿ: ಶನಿಯು ದ್ವಿತೀಯದಲ್ಲಿ ಇದ್ದರೆ ಕುಟುಂಬಕಲಹ, ಮುಖರೋಗ, ರಾಜರಿಂದ ಧನನಾಶ, ವಾಹನಸುಖ, ಲೋಹದಿಂದ ಲಾಭ ಪಡೆಯುತ್ತಾನೆ.

ರಾಹು: ರಾಹುವು ದ್ವಿತೀಯದಲ್ಲಿ ಇದ್ದರೆ ಮುಖರೋಗ, ವಾಕ್ ದೋಷ, ಅಸತ್ಯವನ್ನು ಸಾಧಿಸುವವನು, ಕುಟುಂಬದಲ್ಲಿ ಮರಣ, ನಿರ್ಭಯತೆ, ಸುಖ-ದುಃಖ, ವಿದೇಶದಲ್ಲಿ ಧನ ಸಂಪತನ್ನು ಗಳಿಸುತ್ತಾನೆ.

ಕೇತು: ಕೇತುವು ದ್ವಿತೀಯದಲ್ಲಿ ಇದ್ದರೆ ಧನಹಾನಿ, ದುಃಖ, ದುರಾದೃಷ್ಟ, ಕುಟುಂಬಕಲಹ, ವಾಚಾಳಿತನ, ರಾಜಭಯ, ವಿದ್ಯಾಭ್ಯಾಸದಲ್ಲಿ ವಿಘ್ನ ಮತ್ತು ಅನಾರೋಗ್ಯನೀಡುತ್ತಾನೆ.

## ೨೩. ತೃತೀಯ ಭಾವಫಲ—ಭಾವಕಾರಕ = ಕುಜ

ರವಿ: ರವಿಯು ತೃತೀಯದಲ್ಲಿ ಇದ್ದರೆ ಪ್ರತಾಪವಂತನು, ಪರಾಕ್ರಮಿಯು, ಬುದ್ಧಿವಂತನು, ಸಹೋದರರಿಂದ ಪೀಡಿಸಲ್ಪಟ್ಟವನು, ತೀರ್ಥಯಾತ್ರೆಗಳನ್ನು ಮಾಡುವವನು, ಶತ್ರುಗಳನ್ನು ನಾಶಮಾಡುವವನು, ರಾಜರಿಂದ ಸನ್ಮಾನಿಸಲ್ಪಡುವವನು ಆಗುತ್ತಾನೆ.

ಚಂದ್ರ: ಚಂದ್ರನು ತೃತೀಯದಲ್ಲಿ ಇದ್ದರೆ ಕೃಪಣನು, ಸಾಹಸಿಯು, ನಿರ್ಘೃಣನು, ಪರಾಕ್ರಮಿಯು, ಧನವಂತನು, ತಪಸ್ವಿಯು ಆಗುತ್ತಾನೆ. ಹಿಂಸ್ರ ಸ್ವಭಾವದವನು, ಕೈಕೊಂಡ ಕಾರ್ಯಗಳಲ್ಲಿ ಜಯಲಭಿಸುತ್ತದೆ.

**ಕುಜ :** ಕುಜನು ತೃತೀಯದಲ್ಲಿ ಇದ್ದರೆ ಬುದ್ಧಿವಂತಿಕೆ, ಪರಾಕ್ರಮ ಮತ್ತು ಬಾಹುಬಲದಿಂದ ಧನ ಸಂಪತ್ತನ್ನು ಗಳಿಸುತ್ತಾನೆ. ಸಹೋದರರಿಂದ ವ್ಯಥೆ ಮತ್ತು ಹಾನಿ ಉಂಟಾಗುತ್ತದೆ.

**ಬುಧ :** ಬುಧನು ತೃತೀಯದಲ್ಲಿ ಇದ್ದರೆ ವ್ಯಾಪಾರ ವ್ಯವಹಾರ ಕುಶಲತೆ, ಸಂಘಸಂಸ್ಥೆಗಳಲ್ಲಿ ಪ್ರಭಾವಶಾಲಿಯು, ದುಷ್ಟಬುದ್ಧಿಯವನು, ಭೋಗವಂತನು ಆಗುತ್ತಾನೆ.

**ಗುರು :** ಗುರುವು ತೃತೀಯದಲ್ಲಿ ಇದ್ದರೆ ಕೃಪಣನು, ಕೃತಘ್ನನು, ಮಿತ್ರರಿಲ್ಲದವನು, ಭ್ರಾತೃಸುಖ ಉಳ್ಳವನು ಆಗುತ್ತಾನೆ.

**ಶುಕ್ರ :** ಶುಕ್ರನು ತೃತೀಯದಲ್ಲಿ ಇದ್ದರೆ ಧನಿಕನು, ಕೃಪಣನು, ಅತೃಪ್ತ ಸ್ತ್ರೀಸುಖ ಉಳ್ಳವನು, ಅಪೂರ್ಣ ಪುತ್ರಸುಖ, ಬಲಿಷ್ಠನಾದರೂ ಭೀತನು ಆಗುತ್ತಾನೆ.

**ಶನಿ :** ಶನಿಯು ತೃತೀಯದಲ್ಲಿ ಇದ್ದರೆ ಬುದ್ಧಿವಂತನು, ಪರಾಕ್ರಮ ಉಳ್ಳವನು, ಉದಾರವಂತನು, ಆಶಾವಾದಿ, ಅಸಂತುಷ್ಟನು ಆಗುತ್ತಾನೆ. ಸಹೋದರನಾಶ ಸಂಭವಿಸುತ್ತದೆ.

**ರಾಹು :** ರಾಹುವು ತೃತಿಯದಲ್ಲಿ ಇದ್ದರೆ ಪರಾಕ್ರಮಿ, ಧನವಂತನು ವಿಲಾಸಿಯು, ಸಹೋದರ ಮರಣ ಅಥವಾ ವಿರೋಧ, ದೀರ್ಘಾಯುಸ್ಸು, ವಾಹನ ಸುಖ, ಕೀರ್ತಿ, ಶತ್ರುನಾಶ ಮತ್ತು ಕಿವಿರೋಗ ಉಂಟಾಗುತ್ತದೆ,

**ಕೇತು :** ಕೇತುವು ತೃತೀಯದಲ್ಲಿ ಇದ್ದರೆ ಗುಣವಂತನು, ಧನವಂತನು, ಸುಖವಂತನು, ಕೀರ್ತಿವಂತನು, ಪರಾಕ್ರಮಿಯು ಆಗುತ್ತಾನೆ. ಶತ್ರುನಾಶ ಮತ್ತು ಬಾಹುವೇದನೆ ಉಂಟಾಗುತ್ತದೆ.

## ೨೪. ಚತುರ್ಥ ಭಾವಫಲ

### ಭಾವಕಾರಕ = ಚಂದ್ರ ಮತ್ತು ಬುಧ

**ರವಿ :** ರವಿಯು ಚತುರ್ಥದಲ್ಲಿ ಇದ್ದರೆ ಅತ್ಯಂತ ವಿರಾಜಮಾನನು, ಸಂಬಂಧಿಕರೊಂದಿಗೆ ಜಗಳ, ಗೃಹಕಲಹ, ಕ್ರೂರಸ್ವಭಾವ, ಪ್ರವಾಸ, ಹೃದಯ ವಿಕಾರ, ಅಶಾಂತಚಿತ್ತ, ಅಸುಖ, ಚಂಚಲ ವಿಚಾರ, ಸಂಶಯ, ಪ್ರವೃತ್ತಿ, ಶತ್ರುಗಳಿಂದ ಮಾನಭಂಗ ಸಂಭವಿಸುತ್ತದೆ.

**ಚಂದ್ರ :** ಚಂದ್ರನು ಚತುರ್ಥದಲ್ಲಿ ಇದ್ದರೆ, ಜೀವಿತದ ಆದಿತ್ರಿಭಾಗ ದಲ್ಲಿ ಸಂಕಷ್ಟಗಳು, ಮಧ್ಯಪ್ರಾಯದ ನಂತರ ಅಧಿಕಾರ, ಸುಖ, ವಾಹನ, ಗೃಹ ಇತ್ಯಾದಿ ಲಭಿಸುತ್ತದೆ. ಜನ್ಮಸ್ಥಳ ತ್ಯಜಿಸಿ ಪರಊರಿನಲ್ಲಿ ವಾಸ, ಪಿತ್ರಾರ್ಜಿತ ಸಂಪತ್ತಿನಿಂದ ವಂಚಿತರು ಆಗುತ್ತಾರೆ.

**ಕುಜ :** ಕುಜನು ಚತುರ್ಥದಲ್ಲಿ ಇದ್ದರೆ ಅಸುಖ, ಮಾನಸಿಕ ವ್ಯಥೆ, ಮತ್ತು ಗೃಹಕಲಹ ಅಥವಾ ಭೂವಿವಾದ ಸಂಭವಿಸುತ್ತದೆ. ಸಂಬಂಧಿಕ ರೊಂದಿಗೆ ಕಲಹ ಮತ್ತು ಮಿತ್ರರಿಂದ ಹಾನಿ ಉಂಟಾಗುತ್ತದೆ. ರಾಜಕೀಯ ದಿಂದ ಲಾಭ ಆಗುತ್ತದೆ.

**ಬುಧ :** ಬುಧನು ಚತುರ್ಥದಲ್ಲಿ ಇದ್ದರೆ ವಿದ್ಯಾವಂತನು, ಉತ್ತಮ ಮಿತ್ರರು ಉಳ್ಳವನು, ರಾಜಾಧಿಕಾರಿಯು, ಲೇಖಕನು, ಆಗುತ್ತಾನೆ. ಪಿತ್ರಾ ರ್ಜಿತ ಸಂಪತ್ತು ಲಭಿಸುವುದಿಲ್ಲ.

**ಗುರು :** ಗುರುವು ಚತುರ್ಥದಲ್ಲಿ ಇದ್ದರೆ ಸುಖವಂತನು, ಧನವಂತನು, ದೇವಬ್ರಾಹ್ಮಣರ ಆರಾಧಕನು, ಅಂತಃಕರಣದಲ್ಲಿ ಚಿಂತಿತನು ಆಗುತ್ತಾನೆ.

**ಶುಕ್ರ :** ಶುಕ್ರನು ಚತುರ್ಥದಲ್ಲಿ ಇದ್ದರೆ ನೂತನಗೃಹ, ವಾಹನ, ವಸ್ತ್ರ, ಆಭರಣ, ಸುಖ, ಇತ್ಯಾದಿ ಲಭಿಸುತ್ತದೆ.

**ಶನಿ :** ಶನಿಯು ಚತುರ್ಥದಲ್ಲಿ ಇದ್ದರೆ ಮಾನಸಿಕ ವೇದನೆ, ಅಸುಖ, ಕಲಹ, ಪಿತ್ರಾರ್ಜಿತ ಸಂಪತ್ತಿನಿಂದ ವಂಚಿತನು, ಅವಮಾನ, ವಾತರೋಗ, ದೇಶತ್ಯಾಗ, ಹೃದಯ ವೇದನೆ ನೀಡುತ್ತಾನೆ.

**ರಾಹು :** ರಾಹುವು ಚತುರ್ಥದಲ್ಲಿ ಇದ್ದರೆ ಚಿಂತಿತನು, ಕಷ್ಟಗಳನ್ನು ಅನುಭವಿಸುವವನು, ಸಾಹಸಿಯು ಆಗುತ್ತಾನೆ. ಭ್ರಮಣ, ಕಲ್ಲುಕಾಷ್ಟಗಳ ಹೊಡೆತ, ಬಂಧುಗಳೊಡನೆ ಕಲಹ, ಶತ್ರುಬಾಧೆ, ಉಂಟಾಗುತ್ತದೆ.

**ಕೇತು :** ಕೇತುವು ಚತುರ್ಥದಲ್ಲಿ ಇದ್ದರೆ ಹೆತ್ತವರಿಗೆ ಕಷ್ಟ, ಪಿತ್ರಾರ್ಜಿತ ಸಂಪತ್ತಿನ ಅವನತಿ, ಅಥವಾ ಪಿತ್ರಾರ್ಜಿತ ಸಂಪತ್ತು ಲಭಿಸುವುದಿಲ್ಲ, ಪರನಿಂದೆ, ಚಿಂತೆ, ಕಷ್ಟ, ಸುಖನಾಶ ಆಗುತ್ತದೆ.

## ೨೫. ಪಂಚಮ ಭಾವಫಲ—ಭಾವಕಾರಕ= ಗುರು

**ರವಿ:** ರವಿಯ ಪಂಚಮದಲ್ಲಿ ಇದ್ದರೆ ಪ್ರಥಮ ಸಂತಾನದಿಂದ ದುಃಖ, ಕುಶಾಗ್ರಮತಿ ಮತ್ತು ವ್ಯವಹಾರ ಕುಶಲತೆ ಇರುತ್ತದೆ. ಅಧಿಕಾರ, ಶೌರ್ಯ, ಮಂತ್ರವಿದ್ಯೆ ಇತ್ಯಾದಿಗಳಿಂದ ಪ್ರಸಿದ್ಧಿ ಹೊಂದುತ್ತಾನೆ. ಕಾಮಿಯು, ಪ್ರವಾಸ ನಿರತನು, ಸ್ತ್ರೀಸುಖವಂಚಿತನು, ಅಭಿಮಾನಿಯು, ಉದರವ್ಯಾಧಿಗಳಿಂದ ಪೀಡಿತನು ಆಗುತ್ತಾನೆ.

**ಚಂದ್ರ:** ಚಂದ್ರನು ಪಂಚಮದಲ್ಲಿ ಇದ್ದರೆ ಸಂತಾನಸುಖ, ಹೆಚ್ಚು ಸ್ತ್ರೀಸಂತತಿ, ನಿರ್ಮಲ ಚಿತ್ತ, ಬುದ್ಧಿವಂತಿಕೆ, ಭೂಮಿ ಮತ್ತು ರತ್ನಲಾಭ, ಬಡ್ಡಿ, ವಟ್ಟ ಇತ್ಯಾದಿಗಳಿಂದ ಲಾಭ, ಆಕರ್ಷಕ ವ್ಯಕ್ತಿತ್ವ, ಮತ್ತು ಸುಖ ಲಭಿಸುತ್ತದೆ.

**ಕುಜ:** ಕುಜನು ಪಂಚಮದಲ್ಲಿ ಇದ್ದರೆ ಸಂತಾನ ಚಿಂತೆ ಮತ್ತು ಹಾನಿ, ಹೊಟ್ಟೆಯಲ್ಲಿ ಉರಿ, ಕ್ರೋಧ, ಕ್ರೂರ ಅಥವಾ ಪಾಪಕಾರ್ಯಗಳಲ್ಲಿ ಆಸಕ್ತಿ, ಧನನಾಶ ಮತ್ತು ಮಾನಸಿಕ ವ್ಯಥೆಯಿಂದ ಪೀಡಿಸಲ್ಪಡುತ್ತಾನೆ.

**ಬುಧ:** ಬುಧನು ಪಂಚಮದಲ್ಲಿ ಇದ್ದರೆ ಬುದ್ಧಿವಂತನು ಅಧಿಕಾರಿಯು, ಅಭಿಚಾರ, ಗೂಢವಿದ್ಯೆ ಇತ್ಯಾದಿ ಬಲ್ಲವನು ಆಗುತ್ತಾನೆ. ಪ್ರಥಮ ಸಂತಾನ ನಷ್ಟ ಸಂಭವಿಸುತ್ತದೆ.

**ಗುರು:** ಗುರುವು ಪಂಚಮದಲ್ಲಿ ಇದ್ದರೆ ಜ್ಞಾನವಂತನು, ವಿಲಾಸಿಯು, ಬೋಧಕನು, ಲೇಖಕನು, ಸಂತಾನಚಿಂತೆ, ಮತ್ತು ಫಲಪ್ರಾಪ್ತಿಕಾಲದಲ್ಲಿ ವಿಘ್ನಗಳು ಉಂಟಾಗುತ್ತವೆ.

**ಶುಕ್ರ:** ಶುಕ್ರನು ಪಂಚಮದಲ್ಲಿ ಇದ್ದರೆ ಅಲ್ಪ ಪ್ರಯತ್ನದಿಂದ ಲಾಭ, ಸುಖ, ಮಂತ್ರಸಿದ್ಧಿ, ಕವಿತಾಶಕ್ತಿ, ಉತ್ತಮ ಆಹಾರ ವಿಹಾರ ಲಭಿಸುತ್ತವೆ.

**ಶನಿ:** ಶನಿಯು ಪಂಚಮದಲ್ಲಿ ಇದ್ದರೆ ಧನಹೀನನು, ಬುದ್ಧಿಹೀನನು, ದೀನನು, ನಾಸ್ತಿಕನು, ಸಂತಾನ ಚಿಂತೆ ಮತ್ತು ಉದರ ಶೂಲೆಯಿಂದ ಪೀಡಿತನು ಆಗುತ್ತಾನೆ.

**ರಾಹು:** ರಾಹುವು ಪಂಚಮದಲ್ಲಿ ಇದ್ದರೆ ಧೈರ್ಯ ಇಲ್ಲದವನು, ದಯಾವಂತನು, ಧನಹೀನನು ಮಂದಬುದ್ಧಿಯವನು ಆಗುತ್ತಾನೆ. ವಿದ್ಯಾಭ್ಯಾಸ ದಲ್ಲಿ ವಿಘ್ನಗಳು, ಉದರ ವ್ಯಾಧಿ ಮತ್ತು ಸಂತಾನ ಚಿಂತೆಯನ್ನು ನೀಡುತ್ತಾನೆ.

**ಕೇತು:** ಕೇತುವು ಪಂಚಮದಲ್ಲಿ ಇದ್ದರೆ ಭಯ, ದುಃಖ, ವಿದ್ಯಾಭ್ಯಾಸ ದಲ್ಲಿ ಭಂಗ, ಅಂಜುಬುರುಕತನ, ಧರ್ಮಬಾಹಿರ ಕಾರ್ಯಗಳು, ಪಿಶಾಚ ಪೀಡೆ ಅಥವಾ ದುಷ್ಟ ಶಕ್ತಿಗಳಿಂದ ಹಾನಿ, ವಿದೇಶವಾಸದ ಅಪೇಕ್ಷೆ, ಉದರಶೂಲೆ ಮತ್ತು ಪಶುಸಂಪತ್ತು ನೀಡುತ್ತಾನೆ.

## ೨೬. ಷಷ್ಠಭಾವಫಲ

### ಭಾವಕಾರಕ = ಶನಿ ಮತ್ತು ಕುಜ

**ರವಿ:** ರವಿಯು ಷಷ್ಠದಲ್ಲಿ ಇದ್ದರೆ ಶತ್ರುನಾಶ, ರಾಜಕಾರ್ಯ ಮತ್ತು ಮಿತ್ರರಿಗೋಸ್ಕರ ವ್ಯಯ, ಚತುಷ್ಪಾದ ಮತ್ತು ತಾಯಿಯ ಕುಟುಂಬದವರಿಂದ ಹಾನಿ ಸಂಭವಿಸುತ್ತದೆ. ಉದರ ವ್ಯಾಧಿ, ಯಾತ್ರಾಕಾಲದಲ್ಲಿ ಹಾನಿ ಸಂಭವಿಸು ತ್ತದೆ.

**ಚಂದ್ರ:** ಚಂದ್ರನು ಷಷ್ಠದಲ್ಲಿ ಇದ್ದರೆ ಸುಕುಮಾರ ಶರೀರ, ಅಲ್ಪ ಜೀರ್ಣಶಕ್ತಿ, ಅಲ್ಪಕಾಮಿ, ತೀಕ್ಷ್ಣಸ್ವಭಾವ, ಆಲಸ್ಯತನ, ವೈರಿಗಳು ಉಳ್ಳವನು, ಕಲಹದಿಂದ ಲಾಭ, ಮತ್ತು ಮಾತೃಶೋಕ ನೀಡುತ್ತಾನೆ.

**ಕುಜ:** ಕುಜನು ಷಷ್ಠದಲ್ಲಿ ಇದ್ದರೆ ಬಲಿಷ್ಠನು, ಶತ್ರುಗಳನ್ನು ಜಯಿಸಿ ದವನು, ತಿಳುವಳಿಕೆ ಉಳ್ಳವನು, ಗಾಯಗೊಂಡ ಶರೀರ, ಧನಲಾಭವಾದರೂ ಧನ ಸಂಚಯ ಆಗುವುದಿಲ್ಲ.

**ಬುಧ:** ಬುಧನು ಷಷ್ಠದಲ್ಲಿ ಇದ್ದರೆ ಶತ್ರುರಹಿತನು, ಆದರೆ ಜನರಿಂದ ವಿರೋಧ ಇರುತ್ತದೆ. ಶಕ್ತಿಯಿಂದ ಧನಾರ್ಜನೆ ಮತ್ತು ಸದ್ವ್ಯಯ ಆಗುತ್ತದೆ.

**ಗುರು:** ಗುರುವು ಷಷ್ಠದಲ್ಲಿ ಇದ್ದರೆ, ಪಶುಪಾಲನೆ, ವಿಜಯ ಮತ್ತು ಶತ್ರುರಹಿತನು ಆಗುತ್ತಾನೆ.

**ಶುಕ್ರ :** ಶುಕ್ರನು ಷಷ್ಠದಲ್ಲಿ ಇದ್ದರೆ ದುರ್ಬಲನು, ಶತ್ರುರಹಿತನು, ಸ್ತ್ರೀಯರಿಂದ ದೂಷಿಸಲ್ಪಡುವವನು ಮತ್ತು ಚಿಂತಿತನು ಆಗುತ್ತಾನೆ.

**ಶನಿ :** ಶನಿಯು ಷಷ್ಠದಲ್ಲಿ ಇದ್ದರೆ ಬಲಿಷ್ಠನು, ಶತ್ರುಗಳನ್ನು ಜಯಿಸಿದವನು, ಪಶುಸಂಪತ್ತಿ ಉಳ್ಳವನು, ಕ್ರಾಂತಿಕಾರನು, ಅಧಿಕಾರ, ಕೀರ್ತಿ ಮತ್ತು ಸಂಪತ್ತು ಲಭಿಸುತ್ತದೆ.

**ರಾಹು:** ರಾಹುವು ಷಷ್ಠದಲ್ಲಿ ಇದ್ದರೆ ಕುಲೀನನು, ಬುದ್ಧಿವಂತನು, ಶೂರನು, ಪ್ರಖ್ಯಾತನು, ದೀರ್ಘಾಯುವು, ಸುಖವಂತನು, ಶತ್ರುಗಳನ್ನು ಜಯಿಸಿದವನು ಆಗುತ್ತಾನೆ. ಪಶುಸಂಪತ್ತು ಮತ್ತು ವಾಹನ ಲಭಿಸುತ್ತದೆ.

**ಕೇತು :** ಕೇತುವು ಷಷ್ಠದಲ್ಲಿ ಇದ್ದರೆ ಉದಾರನು, ಬಂಧುಪ್ರಿಯನು, ಗುಣವಂತನು, ಪ್ರಸಿದ್ಧನು, ದೃಢತೆ, ಪ್ರಭುತ್ವ, ಶತ್ರುನಾಶ, ಯಶಸ್ಸು, ಪಶುಸಂಪತ್ತು ಹಲ್ಲು ಮತ್ತು ತುಟಿರೋಗ, ಉಂಟಾಗುತ್ತದೆ. ಮಾನಸಿಕ ಭಯ ಇರುತ್ತದೆ.

## ೨೭. ಸಪ್ತಮ ಭಾವಫಲ-ಭಾವಕಾರಕ= ಶುಕ್ರ

**ರವಿ:** ರವಿಯು ಸಪ್ತಮದಲ್ಲಿ ಇದ್ದರೆ, ವಿರಹ, ಸಂತಾನಚಿಂತೆ, ವ್ಯಾಪಾರದಲ್ಲಿ ಅಲ್ಪಲಾಭ, ಪ್ರತಿಸ್ಪರ್ಧಿಗಳ ದ್ವೇಷದಿಂದ ನಿದ್ರಾನಾಶ, ಪತ್ನಿಯು ಪ್ರಭಾವಶಾಲಿ, ವ್ಯಾಪಾರ ವ್ಯವಹಾರಗಳಲ್ಲಿ ಏರಿಳಿತ, ಕಲಹ, ಅಸಂತುಷ್ಟಿ ನೀಡುತ್ತಾನೆ.

**ಚಂದ್ರ :** ಚಂದ್ರನು ಸಪ್ತಮದಲ್ಲಿ ಇದ್ದರೆ ಮೃಷ್ಟಾನ್ನ ಭೋಜನ ಧನಲಾಭ, ಸ್ತ್ರೀಸುಖ, ಸಂಚಾರ ವ್ಯಾಪಾರ, ಶತ್ರುಗಳಿಂದ ಪರಾಜಿತನು, ಕಾಮಿಯು ಆಗುತ್ತಾನೆ.

**ಕುಜ :** ಕುಜನು ಸಪ್ತಮದಲ್ಲಿ ಇದ್ದರೆ ದಾಂಪತ್ಯ ಕಲಹ, ಸಂಚಾರ ವ್ಯಾಪರ ಮತ್ತು ಎದುರಾಳಿಗಳನ್ನು ನಾಶಮಾಡುತ್ತಾನೆ.

**ಬುಧ :** ಬುಧನು ಸಪ್ತಮದಲ್ಲಿ ಇದ್ದರೆ ಧರ್ಮಶಾಸ್ತ್ರಬಲ್ಲವನು, ಭೋಗವಂತನು, ದೇಹಕಾಂತಿ ಮತ್ತು ಸಂಪತ್ತು ಉಳ್ಳವನು ಆಗುತ್ತಾನೆ.

ಗುರು: ಗುರುವು ಸಪ್ತಮದಲ್ಲಿ ಇದ್ದರೆ ವಿದ್ಯಾವಂತನು. ತಂದೆಗಿಂತ ಅಧಿಕಗುಣ ಉಳ್ಳವನು. ಧನವಂತನು, ಅಧಿಕಾರ ಉಳ್ಳವನು ಆಗುತ್ತಾನೆ. ವಿಳಂಬದಿಂದ ವಿವಾಹ ಆಗುತ್ತದೆ.

ಶುಕ್ರ: ಶುಕ್ರನು ಸಪ್ತಮದಲ್ಲಿ ಇದ್ದರೆ ಕಲಹ ಪ್ರಿಯನು, ಕಾಮುಕನು, ಕಾಮತಂತ್ರ ಕುಶಲನು, ಉತ್ತಮ ಸಂತಾನ ಉಳ್ಳವನು ಆಗುತ್ತಾನೆ.

ಶನಿ: ಶನಿಯು ಸಪ್ತಮದಲ್ಲಿ ಇದ್ದರೆ ಸ್ತ್ರೀಯರಿಂದ ಅಪಮಾನ, ಅಲ್ಪ ಸಂತತಿ, ಮಾನಸಿಕ ಚಾಂಚಲ್ಯ, ಹೀನನಿಚಾರ, ಕಾಮುಕತೆ ಇರುತ್ತದೆ. ದಾಂಪತ್ಯ ಅತೃಪ್ತಿಕರ.

ರಾಹು: ರಾಹುವು ಸಪ್ತಮದಲ್ಲಿ ಇದ್ದರೆ ಗರ್ವಿಷ್ಠನು, ವ್ಯಭಿಚಾರಿ, ರೋಗಿ, ಕುಟಿಲನು, ಸ್ಥಾನನಾಶ, ಪತ್ನಿನಾಶ, ನಿಂದೆ ಮತ್ತು ಪ್ರಿಯಜನರ ವಿರೋಧ ಇರುತ್ತದೆ.

ಕೇತು: ಕೇತುವು ಸಪ್ತಮದಲ್ಲಿ ಇದ್ದರೆ ಶೀಲಹೀನನು, ಅತಿನಿದ್ರೆ, ದೀನವಚನ, ಪ್ರವಾಸದಲ್ಲಿ ಕಷ್ಟ, ಮೂರ್ಖತನ, ಧನನಾಶ, ನೀರಿನಭಯ, ಅನಾಪ್ರಯ, ಮಾನಸಿಕ ವ್ಯಾಕುಲತೆ ಮತ್ತು ಧಾತುಹಾನಿ ಉಂಟಾಗುತ್ತದೆ.

## ೨೮. ಅಷ್ಟಮಭಾವ-ಭಾವಕಾರಕ = ಶನಿ

ರವಿ: ರವಿಯು ಅಷ್ಟಮದಲ್ಲಿ ಇದ್ದಾಗ ಕರ್ಮದಲ್ಲಿ ವಂಚನೆಯಿಂದ ಕಷ್ಟಗಳನ್ನು ಅನುಭವಿಸುತ್ತಾನೆ. ದೃಷ್ಟಿದೋಷ, ಸಂತಾನ ಚಿಂತೆ, ವಿದೇಶಿಯ ಸ್ತ್ರೀಸಹವಾಸ, ಕುತ್ಸಿತಾನ್ನ ಚೋರರಿಂದ ಧನಹಾನಿ ಮತ್ತು ಗುಹ್ಯರೋಗಗಳು ಉಂಟಾಗುತ್ತದೆ.

ಚಂದ್ರ: ಚಂದ್ರನು ಅಷ್ಟಮದಲ್ಲಿ ಇದ್ದರೆ ಕ್ಲೇಷ, ಚಪಲತೆ, ಶತ್ರು ಭಯ ಮತ್ತು ಅನಾರೋಗ್ಯ ಉಂಟಾಗುತ್ತದೆ.

ಕುಜ: ಕುಜನು ಅಷ್ಟಮದಲ್ಲಿ ಇದ್ದರೆ ಅಲ್ಪಸಂತಾನ ಅಥವಾ ಸಂತಾನ ಚಿಂತೆ, ಕುತ್ಸಿತಾನ್ನ, ಕೈಕೊಂಡಕಾರ್ಯಗಳಲ್ಲಿ ವಿಘ್ನಗಳು, ದೃಷ್ಟಿದೋಷ, ಮಿತ್ರರಿಗೆ ಸಹಾಯ ಮಾಡಿದರೂ ಅವರಿಂದ ಹಾನಿ ಮತ್ತು ಶತ್ರುತ್ವ ಉಂಟಾಗುತ್ತದೆ.

**ಬುಧ:** ಬುಧನು ಅಷ್ಟಮದಲ್ಲಿ ಇದ್ದರೆ ದೀರ್ಘಾಯುಸ್ಸು, ವಿಖ್ಯಾತನು. ವಿಷಯ ಸುಖಾಪೇಕ್ಷೆ ಉಳ್ಳವನು ಆಗುತ್ತಾನೆ. ಪರದೇಶದಲ್ಲಿ ವ್ಯಾಪಾರದಿಂದ ಧನ-ಸಂಪತ್ತನ್ನು ಗಳಿಸುತ್ತಾನೆ.

**ಗುರು:** ಗುರುವು ಅಷ್ಟಮದಲ್ಲಿ ಇದ್ದರೆ ಗುಣರಹಿತನು, ಅಥವಾ ನೀಚ ಗುಣ ಉಳ್ಳವನು, ಅನಾರೋಗ್ಯ ಮತ್ತು ಮರಣಶಾಸನ ಧನ ಲಭಿಸುತ್ತದೆ.

**ಶುಕ್ರ:** ಶುಕ್ರನು ಅಷ್ಟಮದಲ್ಲಿ ಇದ್ದರೆ ದೀರ್ಘಾಯು, ಪಶುಸಂಪತ್ತು ಕಷ್ಟದಿಂದ ಜಯ, ನೀಚಗುಣ, ಆರ್ಥಿಕ ಸಂಕಷ್ಟಗಳು ಉಂಟಾಗುತ್ತವೆ.

**ಶನಿ:** ಶನಿಯು ಅಷ್ಟಮದಲ್ಲಿ ಇದ್ದರೆ ದೃಷ್ಟಿದೋಷ, ಧನನಾಶ, ದಾರಿದ್ರ್ಯ, ದುರ್ಬಲತೆ, ಅಂಜುಬುರುಕುತನ, ಸಂತತಿ ಅಥವಾ ಸಂಪತ್ತಿನ ಅಭಾವ, ಬಂಧನ ಉಂಟಾಗುತ್ತದೆ.

**ರಾಹು:** ರಾಹುವು ಅಷ್ಟಮದಲ್ಲಿ ಇದ್ದರೆ ಸಂಕಷ್ಟ, ಕ್ಲೇಶ, ನಿಂದಿತ, ರೋಗಿ, ದುಷ್ಟಸ್ವಭಾವ, ಯಾತನೆ, ಭಾಗ್ಯದ ಏರಿಳಿತ, ಪೂರ್ವಾರ್ಜಿತ ಧನ ನಾಶ, ಗ್ರಂಥಿರೋಗ, ಗುಹ್ಯರೋಗ, ಅಂಡವೃದ್ಧಿ, ಅಲ್ಪಾಯು, ಶಸ್ತ್ರದಿಂದ ಆಘಾತ ಸಂಭವಿಸುತ್ತದೆ.

**ಕೇತು:** ಕೇತುವು ಅಷ್ಟಮದಲ್ಲಿ ಇದ್ದರೆ ಪರಧನದ ಆಕಾಂಕ್ಷೆ, ಪರ ಸ್ತ್ರೀಯರಲ್ಲಿ ಆಸಕ್ತಿ, ದುರಾಚಾರ, ಅತಿಲೋಭ ಗುದರೋಗ, ಪರಿಶ್ರಮ ಮತ್ತು ನಿರಂತರ ಉದ್ಯೋಗ ನೀಡುತ್ತಾನೆ.

## ೨೯. ನವಮ ಭಾವಫಲ

**ಭಾವಕಾರಕ = ರವಿ ಮತ್ತು ಗುರು**

**ರವಿ:** ರವಿಯು ನವಮದಲ್ಲಿ ಇದ್ದರೆ ಕ್ರೂರ ಅಥವಾ ದುಷ್ಕಾರ್ಯ ಪ್ರವೃತ್ತಿ ಮತ್ತು ಮಾನಸಿಕ ಅಶಾಂತಿ ಇರುತ್ತದೆ. ಮನಸ್ಸಿಲ್ಲದಿದ್ದರೂ ಸತತ ಪ್ರಯತ್ನ ಮತ್ತು ಹಠಸಾಧನೆಯಿಂದ ಉನ್ನತ ಪದವಿ, ಕೀರ್ತಿ, ಸಂತಾನ, ಧನ, ಸುಖ ಇತ್ಯಾದಿಗಳನ್ನು ಪಡೆಯುತ್ತಾನೆ. ಸಹೋದರರಿಂದ ಕಷ್ಟಗಳನ್ನು ಅನುಭವಿಸುತ್ತಾನೆ. ಗುರು ಹಿರಿಯರೊಡನೆ ಕಲಹ ಸಂಭವಿಸುತ್ತದೆ.

ಚಂದ್ರ : ಚಂದ್ರನು ನವಮದಲ್ಲಿ ಇದ್ದರೆ. ಸನ್ಮಾನ, ಶೀಘ್ರಭಾಗ್ಯೋದಯ, ಸಾಹಸ, ಧನ, ಸಂಪತ್ತು, ಶರೀರಸುಖ, ಬಂಧುಬಾಂಧವರಿಂದ ಕೂಡಿದವನು ಆಗುತ್ತಾನೆ.

ಕುಜ : ಕುಜನು ನವಮದಲ್ಲಿ ಇದ್ದರೆ ತೀಕ್ಷ್ಣ ಮತ್ತು ಕಠೋರ ಬುದ್ಧಿ ಉಳ್ಳವನು, ಹೆಚ್ಚುಧನ ಮತ್ತು ಭಾಗ್ಯ ಉಳ್ಳವನು, ಪಾಪಕರ್ಮ ನಿರತನು ಆಗುತ್ತಾನೆ.

ಬುಧ : ಬುಧನು ನವಮದಲ್ಲಿ ಇದ್ದರೆ, ಪುತ್ರ, ಧನ, ಸುಖ ಉಳ್ಳವನು ಧರ್ಮಶೀಲನು, ಅತ್ಯಂತ ಬುದ್ಧಿವಂತನು ಪ್ರತಾಪವಂತನು ಆಗುತ್ತಾನೆ.

ಗುರು : ಗುರುವು ನವಮದಲ್ಲಿ ಇದ್ದರೆ ನ್ಯಾಯವಂತನು, ಶಾಂತ ಸ್ವಾಭಾವದವನು, ಸದಾಚಾರಿ, ಧಾರ್ಮಿಕ ವಿಚಾರ ಉಳ್ಳವನು, ಆಗುತ್ತಾನೆ. ಸಹೋದರರಲ್ಲಿ ಭೇಧಾಭಿಪ್ರಾಯ ಅಥವಾ ಕಲಹ ಮತ್ತು ಸಂತಾನ ಚಿಂತೆ ಇರುತ್ತದೆ.

ಶುಕ್ರ : ಶುಕ್ರನು ನವಮದಲ್ಲಿ ಇದ್ದರೆ ನ್ಯಾಯವಂತನು. ಧಾರ್ಮಿಕ ಪ್ರವೃತ್ತಿ ಉಳ್ಳವನು, ಸುಖವಂತನು ಸ್ವಾರ್ಜತವಿತ್ತ ಉಳ್ಳವನು, ಪ್ರಸಿದ್ಧನು ಆಗುತ್ತಾನೆ.

ಶನಿ: ಶನಿಯು ನವಮದಲ್ಲಿ ಇದ್ದರೆ, ವಿದ್ಯಾವಂತನು, ಸಂಶೋಧಕನು, ತೀರ್ಥಯಾತ್ರೆ, ಪುತ್ರ, ಧನ ಸಂಪತ್ತು, ಸುಖ ಉಳ್ಳವನು ಆಗುತ್ತಾನೆ ತೀಕ್ಷ್ಣ ಬುದ್ಧಿ, ಯೋಗಾಭ್ಯಾಸ. ಸನ್ಯಾಸ, ಕರ್ಮನಿಷ್ಠತೆ, ಗೂಢವಿದ್ಯೆಯಲ್ಲಿ ಪರಿಣೀತನು ಆಗುತ್ತಾನೆ.

ರಾಹು : ರಾಹುವು ನವಮದಲ್ಲಿ ಇದ್ದರೆ, ಪುತ್ರ, ಧನ, ಸುಖ, ಸಂಪತ್ತನ್ನು ನೀಡುತ್ತಾನೆ. ವಿದ್ಯಾವಂತನು, ಸಂಶೋಧನಾ ಪ್ರವೃತ್ತಿ ಉಳ್ಳವನು, ನಗರಸಭಾಪತಿಯು, ಸಂತಾನಚಿಂತೆ ಮತ್ತು ಬಾಹುರೋಗದಿಂದ ಪೀಡಿತನು ಆಗುತ್ತಾನೆ.

ಕೇತು : ಕೇತುವು ನವಮದಲ್ಲಿ ಇದ್ದರೆ ಕ್ರೋಧಿ. ಪರನಿಂದಕನು, ವಂಚಕನು, ಶೂರನು, ಅಭಿಮಾನಿ, ನಿರುತ್ಸಾಹಿ, ಧನ, ಧರ್ಮ ಮತ್ತು ಶೀಲ ಇಲ್ಲದವನು ಆಗುತ್ತಾನೆ. ಪುತ್ರಚಿಂತೆ ಮತ್ತು ತಂದೆಯೊಂದಿಗೆ ಬೇಧಾಭಿಪ್ರಾಯ ಇರುತ್ತದೆ.

# ೩೦. ದಶಮಭಾವ ಫಲ

## ಭಾವಕಾರಕ = ಗುರು, ರವಿ, ಮತ್ತು ಬುಧ

**ರವಿ :** ರವಿಯು ದಶಮದಲ್ಲಿ ಇದ್ದರೆ ಪರಿಶ್ರಮದಿಂದ ಉನ್ನತ ಪದವಿ. ಕೀರ್ತಿ ಲಭಿಸುತ್ತದೆ. ತಾಯಿಯಿಂದ ದುಃಖ ಅಥವಾ ಕಲಹ, ಪ್ರಿಯಜನರ ವಿಯೋಗ ಮತ್ತು ಚಿತ್ತಚಾಂಚಲ್ಯ ಇರುತ್ತದೆ. ವಿದ್ಯೆ, ಸುಖ, ವಾಹನ, ಐಶ್ವರ್ಯ ಮತ್ತು ಪಿತ್ರಾರ್ಜಿತ ಸಂಪತ್ತು ಲಭಿಸುತ್ತದೆ.

**ಚಂದ್ರ :** ಚಂದ್ರನು ದಶಮದಲ್ಲಿ ಇದ್ದರೆ ನ್ಯಾಯ-ನೀತಿ, ಪರಾಕ್ರಮ, ಬಂಧು, ಸುಖ, ಸಫಲತೆ, ವೈಭವ, ಕರ್ಮಸಿದ್ಧಿ ನೀಡುತ್ತಾನೆ.

**ಕುಜ :** ಕುಜನು ದಶಮದಲ್ಲಿ ಇದ್ದರೆ ವೀರ್ಯವಂತನು, ಪರಾಕ್ರಮಿಯು, ಸುಖವಂತನು, ಕೀರ್ತಿವಂತನು, ಪರಿಶ್ರಮದಿಂದ ಪ್ರಗತಿ ಹೊಂದಿದವನು ಆಗುತ್ತಾನೆ. ಕರ್ಮಕ್ಕೆ ತಕ್ಕ ಪ್ರತಿಫಲ ನೀಡುವುದಿಲ್ಲ.

**ಬುಧ :** ಬುಧನು ದಶಮದಲ್ಲಿ ಇದ್ದರೆ ಬಲಿಷ್ಠನು, ಶೂರನು, ಸುಖವಂತನು, ಹೆಚ್ಚುಲಾಭ ಉಳ್ಳವನು ಪೂಜನೀಯನು, ದಯಾವಂತನು ಆಗುತ್ತಾನೆ. ಪಿತ್ರಾರ್ಜಿತ ಸಂಪತ್ತು ಲಭಿಸುತ್ತದೆ.

**ಗುರು :** ಗುರುವು ದಶಮದಲ್ಲಿ ಇದ್ದರೆ ಭಾಗ್ಯವೃದ್ಧಿ, ಧನ, ಅಧಿಕಾರ, ಕೀರ್ತಿ ಮತ್ತು ಯಶಸ್ಸನ್ನು ನೀಡುತ್ತಾನೆ.

**ಶುಕ್ರ :** ಶುಕ್ರನು ದಶಮದಲ್ಲಿ ಇದ್ದರೆ, ಧನ, ವಾಹನ, ಪ್ರಭಾವ, ವ್ಯಾಪಾರದಲ್ಲಿ ಸಫಲತೆ, ವ್ಯವಹಾರ ಕುಶಲತೆ, ವಾದ-ವಿವಾದ ಪ್ರವೃತ್ತಿ ನೀಡುತ್ತಾನೆ.

**ಶನಿ :** ಶನಿಯು ದಶಮದಲ್ಲಿ ಇದ್ದರೆ ಶೂರನು, ಸುಖವಂತನು, ಮುಖಂಡನು, ಅಧಿಕಾರಿ, ಮಂತ್ರಿ, ಹೀನಕರ್ಮಗಳನ್ನು ಮಾಡುವವನು, ಕೃಷಿ, ಬೇಸಾಯ, ಲೋಹದ ವ್ಯವಹಾರ ಇತ್ಯಾದಿಗಳನ್ನು ಮಾಡುತ್ತಾನೆ. ಕರ್ಮಕ್ಕೆ ತಕ್ಕ ಪ್ರತಿಫಲ ನೀಡುವುದಿಲ್ಲ. ಅಧಿಕ ಪರಿಶ್ರಮ ಅಲ್ಪಲಾಭ ಲಭಿಸುತ್ತದೆ.

**ರಾಹು :** ರಾಹುವು ದಶಮದಲ್ಲಿ ಇದ್ದರೆ ಶೂರನು, ಧನವಂತನು, ಅಭಿಮಾನಿ, ಕಲಹಸ್ವಭಾವದವನು, ಭೋಗವಂತನು, ವಿಲಾಸಿಯು, ಅಧಿಕ ಪರಿಶ್ರಮ ಉಳ್ಳವನು ಆಗುತ್ತಾನೆ.

ಕೇತು : ಕೇತುವು ದಶಮದಲ್ಲಿ ಇದ್ದರೆ ಶೂರನು, ತೇಜಸ್ವಿಯು. ಪ್ರಸಿದ್ಧಿ ಅಶಾಂತಿ, ಪಾಪಕೃತ್ಯ, ಸಂಗೀತ ಮತ್ತು ಪರಸ್ತ್ರೀಯರಲ್ಲಿ ಆಸಕ್ತಿ ಉಳ್ಳವನು, ಕಾರ್ಯವಿಘ್ನತೆ ಮತ್ತು ಹೆತ್ತವರ ಸುಖ ಇಲ್ಲದವನು ಆಗುತ್ತಾನೆ.

## ೩೧. ಏಕಾದಶಭಾವ ಫಲ

**ಭಾವಕಾರಕ = ಗುರು**

ರವಿ : ರವಿಯು ಲಾಭದಲ್ಲಿ ಇದ್ದರೆ ಧನಸಂಪತ್ತು, ಲಾಭ, ಶತ್ರುನಾಶ, ಸಂತಾಪಚಿಂತೆ ನೀಡುತ್ತಾನೆ. ಪ್ರತಾಪವಂತನು, ಶ್ರೀಮಂತನು ಆಗುತ್ತಾನೆ.

ಚಂದ್ರ : ಚಂದ್ರನು ಲಾಭದಲ್ಲಿ ಇದ್ದರೆ ಖ್ಯಾತಿ, ಪ್ರತಿಷ್ಠೆ, ಅಧಿಕಾರ, ವಸ್ತ್ರ, ಧನಸಂಪತ್ತು ಮತ್ತು ಸ್ತ್ರೀಸಂತಾನ ಲಭಿಸುತ್ತದೆ.

ಕುಜ : ಕುಜನು ಲಾಭದಲ್ಲಿ ಇದ್ದರೆ ವಾಹನ, ಪಶುಸಂಪತ್ತು, ಧನಲಾಭ, ಶತ್ರುನಾಶ, ಸ್ವಪರಿಶ್ರಮ ಮತ್ತು ಪ್ರಯತ್ನದಿಂದ ಭಾಗ್ಯೋನ್ನತಿ ನೀಡುತ್ತಾನೆ. ಕೃಪಣತ್ವದಿಂದ ಧನನಷ್ಟ ಸಂಭವಿಸುತ್ತದೆ.

ಬುಧ : ಬುಧನು ಲಾಭದಲ್ಲಿ ಇದ್ದರೆ ಲಾಭ, ಪ್ರತಿಭೆ, ದಾನ–ಧರ್ಮ ಮತ್ತು ಕೀರ್ತಿ ನೀಡುತ್ತಾನೆ.

ಗುರು : ಗುರುವು ಲಾಭದಲ್ಲಿ ಇದ್ದರೆ ಬುದ್ಧಿವಂತನು, ಭಾಗ್ಯವಂತನು, ಕರ್ಮಕುಶಲನು. ಆಗುತ್ತಾನೆ. ಹೆಚ್ಚು ಲಾಭ, ಪ್ರಸಿದ್ಧಿ ಮತ್ತು ಸಂಪತ್ತು ಲಭಿಸುತ್ತದೆ.

ಶುಕ್ರ : ಶುಕ್ರನು ಲಾಭದಲ್ಲಿ ಇದ್ದರೆ ಸದಾಚಾರ, ಕೀರ್ತಿ, ವೈಭವ, ಅಧಿಕಾರ ಮತ್ತು ಅಧಿಕಲಾಭವನ್ನು ನೀಡುತ್ತಾನೆ.

ಶನಿ : ಶನಿಯು ಲಾಭದಲ್ಲಿ ಇದ್ದರೆ ದೀರ್ಘಾಯು, ಕೀರ್ತಿವಂತನು, ಭಾಗ್ಯವಂತನು ವಿದ್ಯಾವಂತನು, ಧನವಂತನು ಆಗುತ್ತಾನೆ. ಜವಳಿ ವ್ಯವಹಾರದಿಂದ ಹಾನಿ ಸಂಭವಿಸುತ್ತದೆ.

ರಾಹು : ರಾಹುವು ಲಾಭದಲ್ಲಿ ಇದ್ದರೆ ಧನ, ಭಾಗ್ಯ, ಕೀರ್ತಿ, ವಿದ್ಯೆ, ಸಂತಾನ, ದೀರ್ಘಾಯುಸ್ಸು, ವಿದೇಶವ್ಯಾಪಾರ, ವಾಹನ, ಆಭರಣ ನೀಡುತ್ತಾನೆ.

ಕೇತು : ಕೇತುವು ಲಾಭದಲ್ಲಿ ಇದ್ದರೆ ಪರಾಕ್ರಮ, ಲೋಕಪ್ರಿಯತೆ, ಪ್ರಶಂಸೆ, ಸಂತುಷ್ಟಿ, ಅಧಿಕಾರ, ಉತ್ತಮಕಾರ್ಯ, ಲಾಭ, ಅರ್ಥಸಿದ್ಧಿ, ವಾಹನ, ಉದರವ್ಯಾಧಿ ನೀಡುತ್ತಾನೆ.

# ೨೩. ದ್ವಾದಶ ಭಾವಫಲ

### ಭಾವಕಾರಕ = ಶನಿ

**ರವಿ :** ರವಿಯು ವ್ಯಯಭಾವದಲ್ಲಿ ಇದ್ದರೆ ನೇತ್ರದೋಷ, ದಾಹ, ದುಃಖ, ಸೋಲು ಅವನತಿ ಮತ್ತು ಪ್ರಯಾಣದಲ್ಲಿ ಹಾನಿ ನೀಡುತ್ತಾನೆ.

**ಚಂದ್ರ :** ಚಂದ್ರನು ವ್ಯಯದಲ್ಲಿ ಇದ್ದರೆ ಶತ್ರುಬಾಧೆ, ಹಿಂಸ್ರಸ್ವಭಾವ, ನೇತ್ರರೋಗ, ಅಂಗಹೀನತೆ, ತಾಯಿ ಮತ್ತು ಸಂಬಂಧಿಕರಿಂದ ಮಾನಸಿಕ ವ್ಯಥೆ, ಸತ್ಕರ್ಮ ಸದ್ವಿನಿಯೋಗ ಪ್ರವೃತ್ತಿ ಇರುತ್ತದೆ.

**ಕುಜ :** ಕುಜನು ವ್ಯಯದಲ್ಲಿ ಇದ್ದರೆ ಪತಿತನು, ಆಯುಸ್ಸಿನ ಹಾನಿ, ಆಯುಧಗಳಿಂದ ಗಾಯ, ಧನನಾಶ, ಅಪವಾದ, ಕಳ್ಳರಭಯ, ಪರರ ಮಾತಿನಂತೆ ನಡೆಯುವುದರಿಂದ ದುಃಖ ಮತ್ತು ಕಲಹ ನೀಡುತ್ತಾನೆ.

**ಬುಧ :** ಬುಧನು ವ್ಯಯದಲ್ಲಿ ಇದ್ದರೆ ಪತಿತನು, ಶತ್ರುಗಳನ್ನು ನಾಶ ಮಾಡುವವನು, ಧನ ಸಂಪತ್ತು ಮತ್ತು ಭೋಗವನ್ನು ನೀಡುತ್ತಾನೆ.

**ಗುರು :** ಗುರುವು ವ್ಯಯದಲ್ಲಿ ಇದ್ದರೆ ಅಭಿಮಾನ, ದುಷ್ಟಸ್ವಭಾವ, ಕೃಪಣತ್ವ, ಸ್ವಾರ್ಥಪರತೆ, ಧನನಾಶ ಮತ್ತು ಗೂಢವಿದ್ಯೆಯನ್ನು ನೀಡುತ್ತಾನೆ.

**ಶುಕ್ರ :** ಶುಕ್ರನು ವ್ಯಯದಲ್ಲಿ ಇದ್ದರೆ ದುಷ್ಟಸ್ವಭಾವದವನು, ಆರ್ಥಿಕ ಪರಿಮಿತ ಉಳ್ಳವನು, ಕಲಹಸ್ವಭಾವದವನು ಕಾಮುಕನು ಆಗುತ್ತಾನೆ. ಉಚ್ಚದ ಶುಕ್ರನು ಧನವನ್ನು ನೀಡುತ್ತಾನೆ. ಆದರೆ ದ್ವಿಭಾರ್ಯಾಯೋಗ ಸಂಭವನೀಯ.

**ಶನಿ :** ಶನಿಯು ವ್ಯವಭಾವದಲ್ಲಿ ಇದ್ದರೆ ಪತಿತನು, ತೀಕ್ಷ್ಣಬುದ್ಧಿಯವನು, ನಿರ್ದಯಿಯು, ಅನಾವ್ರಯ, ಆಲಸ್ಯತನ, ಮಂದದೃಷ್ಟಿ ಮತ್ತು ಬಂಧನ ಸಂಭವಿಸುತ್ತದೆ.

**ರಾಹು :** ರಾಹುವು ವ್ಯಯಭಾವದಲ್ಲಿ ಇದ್ದರೆ ಶೀಲ ಇಲ್ಲದವನು, ನೀಚ ಕೃತ್ಯ ಮಾಡುವವನು, ಧನವಂತನು, ಕಪಟಿಯು, ಸಂಚಾರಶೀಲನು, ಆಗುತ್ತಾನೆ, ಕಾಲುನೋವು, ನೇತ್ರರೋಗ ಸಂಭವಿಸುತ್ತದೆ. ಹೀನಕರ್ಮದಿಂದ ಧನನಾಶ ಸಂಭವಿಸುತ್ತದೆ.

ಕೇತು : ಕೇತುವು ವ್ಯಯದಲ್ಲಿ ಇದ್ದರೆ ಶೀಲ ಇಲ್ಲದವನು, ಚಂಚಲ ಸ್ವಭಾವದವನು, ಗುಪ್ತಪಾಪ ಮಾಡುವವನು ಆಗುತ್ತಾನೆ. ಉತ್ತಮ ಶಿಕ್ಷಣ ಲಭಿಸುತ್ತದೆ. ಶತ್ರುನಾಶ ಮತ್ತು ಧನನಾಶ ಉಂಟಾಗುತ್ತದೆ.

ಮೇಲೆ ಹೇಳಿದ ಭಾವಫಲಗಳನ್ನು ನಿರ್ಣಯಿಸುವಾಗ ಭಾವಸ್ಥಿತ ಗ್ರಹನ ಬಲ, ಉಚ್ಚಾದಿಸ್ಥಿತಿ, ಇತರ ಗ್ರಹರ ಪ್ರಭಾವ ಆದಿ ತಿಳಿದು ಫಲ ನಿರ್ಣಯಿಸ ಬೇಕು. ಉಚ್ಚ, ಸ್ವಕ್ಷೇತ್ರ, ಮೂಲತ್ರಿಕೋಣ, ಮಿತ್ರಕ್ಷೇತ್ರದಲ್ಲಿರುವ ಗ್ರಹರ ಶುಭಫಲವು ಪುಷ್ಟ ಆಗುತ್ತದೆ. ಅಶುಭಫಲವು ಕ್ಷೀಣವಾಗುತ್ತದೆ. ನೀಚ ರಾಶಿಸ್ಥಿತ, ಶತ್ರುಕ್ಷೇತ್ರಗತ, ಅಸ್ತ, ಪಾಪದೃಷ್ಟ ಗ್ರಹರು ಅಶುಭಫಲವನ್ನು ವೃದ್ಧಿಮಾಡಿ ಶುಭಫಲಗಳನ್ನು ಕ್ಷೀಣಗೊಳಿಸುತ್ತಾರೆ. ಗ್ರಹಸ್ಥಿತಿ, ಭಾವಾಧಿಪತಿ ಮತ್ತು ಭಾವಕಾರಕನ ಬಲಾಬಲ ಇತ್ಯಾದಿ ತಿಳಿದು ಭಾವಫಲವನ್ನು ನಿರ್ಣಯಿಸಬೇಕು.

## ೩೩. ಆಯುರ್ದಾಯ

ಜನನ ಸಮಯದಾರಭ್ಯ ಅವಸಾನ ಪರ್ಯಂತದ ಕಾಲವನ್ನು ಆಯುರ್ದಾಯ ಎಂದು ಕರೆಯುತ್ತಾರೆ. ಲಗ್ನಭಾವವು ದೇಹವನ್ನು, ಅಷ್ಟಮವು ಜೀವವನ್ನು ಸೂಚಿಸುತ್ತದೆ. ಶರೀರ ಮತ್ತು ಜೀವಾತ್ಮನ ಸಂಘರ್ಷದ ಅಂತ್ಯವು ಮಾನವನ ಅವಸಾನ ಆಗಿರುತ್ತದೆ ಅಷ್ಟಮಭಾವ ಮತ್ತು ತೃತೀಯ ಭಾವವು ಆಯುಷ್ಯ ಸ್ಥಾನ ಆಗಿರುತ್ತದೆ. ಇವುಗಳ ವ್ಯಯಸ್ಥಾನವಾದ ಸಪ್ತಮ ಮತ್ತು ದ್ವಿತೀಯ ಭಾವವು ಮಾರಕ ಸ್ಥಾನ ಆಗಿರುತ್ತದೆ.

ಲಗ್ನಾಧಿಪತಿ, ಗುರು ಅಥವಾ ಬುಧನು ಲಗ್ನವನ್ನು ನೋಡಬೇಕು. ಅಥವಾ ಲಗ್ನದಲ್ಲಿ ಇರಬೇಕು. ಚಂದ್ರನು ಬಲಿಷ್ಠನಾಗಿ ಶುಭದೃಷ್ಟಿ, ಶುಭ ಯೋಗದಲ್ಲಿ ಇರಬೇಕು. ಇದು ಅರಿಷ್ಟಯೋಗಗಳನ್ನು ನಾಶಮಾಡಿ ದೀರ್ಘಾಯುಸ್ಸನ್ನು ನೀಡುತ್ತದೆ.

ಆಯುರ್ದಾಯ ವಿಭಾಗ : (1) ಎಂಟು ವರ್ಷದೊಳಗೆ ಮರಣ ಸಂಭವಿಸಿದರೆ ಬಾಲಾರಿಷ್ಟ (2) ಇಪ್ಪತ್ತು ವರ್ಷದೊಳಗೆ ಮರಣವಾದರೆ ಯೋಗಜಾಯು (3) ಮೂವತ್ತೆರಡು ವರ್ಷದೊಳಗೆ ಮರಣ ಸಂಭವಿಸಿದರೆ

ಅಲ್ಪಾಯುಂ(4)ಆರ್ವತ್ತನಾಲ್ಕುವರ್ಷದೊಳಗೆ ಮರಣವಾದರೆ ಮಧ್ಯಾಯುಂ (5) ನೂರು ವರ್ಷದೊಳಗೆ ಮರಣವಾದರೆ ದೀರ್ಘಾಯುಂ (6) ನೂರು ವರ್ಷಕ್ಕೆ ಮೇಲ್ಪಟ್ಟ ಆಯುಸ್ಸು ಉತ್ತಮಾಯುಂ (7) ನೂರಿಪ್ಪತ್ತು ವರ್ಷ ಆಯುಸ್ಸು ಪೂರ್ಣಾಯುಂ (8) ನೂರಿಪ್ಪತ್ತು ವರ್ಷಕ್ಕೆ ಮೇಲ್ಪಟ್ಟ ಆಯುರ್ದಾಯವನ್ನು ಅಮಿತಾಯುಂ ಎಂದು ಕರೆಯುತ್ತಾರೆ.

**ಮಾರಕಸ್ಥಾನ:** ದ್ವಿತೀಯ ಮತ್ತು ಸಪ್ತಮ ಭಾವಗಳು ಮಾರಕ ಸ್ಥಾನಗಳು ಆಗಿರುತ್ತವೆ. ಮಾರಕಸ್ಥಾನಗಳಲ್ಲಿ ಸಪ್ತಮ ಭಾವಕ್ಕಿಂತ ದ್ವಿತೀಯ ಭಾವವು ಬಲಿಷ್ಠವಾದ ಮಾರಕ ಸ್ಥಾನ ಆಗಿರುತ್ತದೆ. ಮಾರಕಸ್ಥಾನಗಳಲ್ಲಿ ಮಾರಕಗ್ರಹರಿದ್ದರೆ ಅಥವಾ ಪಾಪಗ್ರಹ, ಅಸ್ತಂಗತ ನೀಚಾದಿ ಗ್ರಹರಿದ್ದರೆ ಅವರ ದಶಾಭುಕ್ತಿಗಳಲ್ಲಿ ಮರಣ ಸಂಭವಿಸುತ್ತದೆ. ಮೇಲಿನ ಗ್ರಹರ ದಶಾಭುಕ್ತಿಗಳಲ್ಲಿ ಮರಣ ಸಂಭವಿಸದಿದ್ದರೆ, ವ್ಯಯಾಧಿಪತಿಯ ದಶಾಭುಕ್ತಿಯಲ್ಲಿ ಮರಣ ಸಂಭವಿಸುತ್ತದೆ. ಮಾರಕ ಗ್ರಹನಿಗೆ ಪಾಪಸಂಬಂಧ ಇರಬೇಕು ಅನ್ಯಥಾ ಮಾರಕ ಸಂಭವಿಸದು.

**ಮಾರಕಾಧಿಪತಿ :** (1) ಸಪ್ತಮಾಧಿಪತಿ (2) ದ್ವಿತೀಯಾಧಿಪತಿ (3) ಮಾರಕಾಧಿಪತಿಯ ಯುತಿಯಲ್ಲಿದ್ದಗ್ರಹ. ಬಲಿಷ್ಠ ಮಾರಕ (4) ದ್ವಿತೀಯದಲ್ಲಿದ್ದ ಗ್ರಹ (5) ಸಪ್ತಮದಲ್ಲಿದ್ದ ಗ್ರಹ (6) ಸಪ್ತಮಾಧಿಪತಿಯು ದ್ವಿತೀಯದಲ್ಲಿ ಬಲಿಷ್ಠಮಾರಕ (7) ದ್ವಿತೀಯಾಧಿಪತಿ ಸಪ್ತಮದಲ್ಲಿ ಬಲಿಷ್ಠ ಮಾರಕನು ಆಗುತ್ತಾನೆ.

**ಮರಣಹೇತು:** (1) ನಿಜಹೇತು (2) ಆಗಂತುಕ ಹೇತು, ನಿಜಹೇತುವಿನಲ್ಲಿ ಎರಡು ವಿಧ (1) ಶಾರೀರಿಕ (2) ಮಾನಸಿಕ, ಆಗಂತುಕ ಹೇತುವಿನಲ್ಲಿ ಎರಡು ವಿಧ (1) ದೃಷ್ಟ ನಿಮಿತ್ತಜ (2) ಅದೃಷ್ಟ ನಿಮಿತ್ತಜ.

**ಶಾರೀರಿಕಹೇತು:** ವಾತ, ಪಿತ್ತ, ಕಫ, ತ್ರಿದೋಷ, ಸಂಸರ್ಗ, ಸನ್ನಿಪಾತಾದಿ ದೋಷಗಳಿಂದ ಮರಣ ಸಂಭವಿಸುತ್ತದೆ. ಅಷ್ಟಮಸ್ಥಿತ ಅಥವಾ ಅಷ್ಟಮವನ್ನು ನೋಡುವ ಗ್ರಹರಿಂದ ಮತ್ತು ಅಷ್ಟಮಾಧಿಪತಿಯ ಭಾವಸ್ಥಿತಿ, ಬಲಾಬಲ ಹಾಗೂ ಗುಣಾವಗುಣಗಳಿಂದ ಮರಣ ಹೇತುವನ್ನು ತಿಳಿಯಬೇಕು.

ಮಾನಸಿಕಹೇತು : ಭಯ ಶೋಕ, ಕ್ರೋಧ, ಉದ್ವೇಗ ಜನಿತವ್ಯಾಧಿಯಿಂದ ಮರಣ ಸಂಭವಿಸುತ್ತದೆ. ಇದು ಪಂಚಮಾಧಿಪತಿಗೆ ಷಷ್ಠಾಧಿಪತಿಯ ಯೋಗ, ದೃಷ್ಟಿ ಅಥವಾ ಸಂಬಂಧದಿಂದ ಉದ್ಭವಿಸುತ್ತದೆ.

ದೃಷ್ಟ ನಿಮಿತ್ತಜ ಹೇತು: ಸದ್ಯೋ ವ್ರಣಾದಿ ವ್ಯಾಧಿಗಳು ಷಷ್ಠಾಧಿಪತಿಯಿಂದ ಉಂಟಾಗುತ್ತದೆ.

ಅದೃಷ್ಟ ನಿಮಿತ್ತಜ ಹೇತು: ಅಭಿಘಾತ, ಅಭಿಚಾರ, ಶಾಪ ಮೊದಲಾದವುಗಳ ಜನಿತ ಹೇತುವಿನಿಂದ ಮರಣ ಸಂಭವಿಸುತ್ತದೆ. ಷಷ್ಠಾಧಿಪತಿ ಅಥವಾ ಅವನ ದೃಷ್ಟಿ ಮತ್ತು ಷಷ್ಠರಾಶಿಯಿಂದ ಸೂಚಿಸಲ್ಪಡುತ್ತದೆ. ಅಷ್ಟಮಾಧಿಪತಿಯ ಯೋಗ ದೃಷ್ಟಿಯಿಂದ ಇದು ಪ್ರಬಲ ಆಗುತ್ತದೆ.

ಜನ್ಮ ಲಗ್ನದಿಂದ ಅಷ್ಟಮಭಾವವು ಗ್ರಹರಹಿತವಾಗಿದ್ದು, ಬಲಿಷ್ಠಗ್ರಹದಿಂದ ನೋಡಲ್ಪಟ್ಟಾಗ, ಆ ಗ್ರಹನಿಗೆ ಹೇಳಿದ ಧಾತುಪ್ರಕೋಪದಿಂದ, ಜಾತಕನ ಅಷ್ಟಮಭಾವರಾಶಿಯು ಸೂಚಿಸುವ ಅಂಗದಲ್ಲಿ ರೋಗ ಉಂಟಾಗಿ ಮರಣ ಆಗುತ್ತದೆ. ಬಲಿಷ್ಠರಾದ ಅನೇಕ ಗ್ರಹರು ಗ್ರಹರಹಿತ ಅಷ್ಟಮಭಾವವನ್ನು ನೋಡಿದರೆ, ಆ ಗ್ರಹರಿಗೆ ಹೇಳಿದ ಧಾತುಪ್ರಕೋಪದಿಂದ. ಆ ಸೂಚಿತ ಅಂಗಕ್ಕೆ ಪೀಡೆಯುಂಟಾಗಿ ಮರಣ ಸಂಭವಿಸುತ್ತದೆ.

[ಪುಟ 54ರಲ್ಲಿರುವ ೧೮. ಕಾಲಪುರುಷನ ಅಂಗವಿಭಾಗ ವಿಚಾರ ನೋಡಿರಿ.]

ಸೂರ್ಯನು–ಅಗ್ನಿಯಿಂದ, ಚಂದ್ರನು–ನೀರಿನಿಂದ, ಕುಜನು–ಆಯುಧದಿಂದ, ಬುಧನು–ಜ್ವರದಿಂದ, ಗುರುವು–ಉದರವ್ಯಾಧಿಯಿಂದ, ಶುಕ್ರನು – ಬಾಯಾರಿಕೆಯಿಂದ, ಶನಿಯು – ಉಪವಾಸದಿಂದ, ಮರಣ ದಾಯಕರು ಆಗುತ್ತಾರೆ.

ಆಯುರ್ಬಲವಿದ್ದರೆ ರೋಗಗಳನ್ನು ಚಿಕಿತ್ಸೆ, ಪರಿಹಾರ ಇತ್ಯಾದಿಗಳಿಂದ ಗುಣಪಡಿಸಬಹುದು. ಅಸಾಧ್ಯವಾದಲ್ಲಿ ತ್ರಿಸ್ಫುಟ (ಜನನ ಕಾಲದ ಲಗ್ನಸ್ಫುಟ, ಚಂದ್ರಸ್ಫುಟ ಮತ್ತು ಮಾಂದಿಸ್ಫುಟವನ್ನು ಕೂಡಿಸಿ ಬಂದ ಲಬ್ಧಸ್ಫುಟವನ್ನು ತಿಸ್ಫುಟ ಎಂದು ಕರೆಯುತ್ತಾರೆ) ಸೂಚಿತ ಯೋಗದಿಂದ ನಿರ್ಯಾಣಕಾಲವನ್ನು ಚಿಂತಿಸಬೇಕು.

ಗ್ರಹರ ಧಾತುಪ್ರಕೋಪ: ಇದನ್ನು ತ್ರಿದೋಷ–ವಾತ, ಪಿತ್ತ, ಕಫ ಎನ್ನುತ್ತಾರೆ ಸೂರ್ಯ–ಪಿತ್ತ, ಚಂದ್ರ-ವಾತ-ಕಫ, ಕುಜ-ಪಿತ್ತ, ಬುಧ - ತ್ರಿದೋಷ, ಗುರು - ಕಫ, ಶುಕ್ರ - ಕಫ-ವಾತ, ಮತ್ತು ಶನಿಯು ವಾತಪ್ರಕೋಪ ನೀಡುತ್ತಾನೆ.

# ೩೪. ನಕ್ಷತ್ರ ಫಲ

**ಅಶ್ವಿನೀ :** ಅಶ್ವಿನೀ ನಕ್ಷತ್ರದಲ್ಲಿ ಜನಿಸಿದವನು ಅಲಂಕಾರದಲ್ಲಿ ಪ್ರೀತಿ ಉಳ್ಳವನು, ಸೌಂದರ್ಯವಂತನು, ಭಾಗ್ಯವಂತನು, ಸಮರ್ಥನು, ಬುದ್ಧಿವಂತನು ಆಗುತ್ತಾನೆ.

**ಭರಣೀ:** ಭರಣೀ ನಕ್ಷತ್ರದಲ್ಲಿ ಜನಿಸಿದವನು ಹಿಡಿದ ಕಾರ್ಯಗಳನ್ನು ದೃಢ ನಿಶ್ಚಯದಿಂದ ಪೂರೈಸುತ್ತಾನೆ. ಸತ್ಯವಂತನು, ರೋಗವಿಲ್ಲದವನು, ಸಮರ್ಥನು, ಸುಖವಂತನು ಆಗುತ್ತಾನೆ.

**ಕೃತ್ತಿಕಾ:** ಕೃತ್ತಿಕಾ ನಕ್ಷತ್ರದಲ್ಲಿ ಜನಿಸಿದವನು ಅಧಿಕವಾಗಿ ಆಹಾರ ಸೇವಿಸುವವನು, ಪರಸ್ತ್ರೀಯರಲ್ಲಿ ಆಸಕ್ತಿ ಉಳ್ಳವನು, ಕಾಂತಿಯುತನು, ಪ್ರಖ್ಯಾತನು ಆಗುತ್ತಾನೆ.

**ರೋಹಿಣೀ:** ರೋಹಿಣೀ ನಕ್ಷತ್ರದಲ್ಲಿ ಜನಿಸಿದವನು ಸತ್ಯವಂತನು, ಶುಚಿರ್ಭೂತನು, ಮಧುರವಾಗಿ ಮಾತಾಡುವವನು, ಪರಿಶುದ್ಧನು ನಿಶ್ಚಲವಾದ ಮನಸ್ಸು ಉಳ್ಳವನು ಸುಂದರವಾದ ಶರೀರಉಳ್ಳವನು ಆಗುತ್ತಾನೆ.

**ಮೃಗಶಿರಾ:** ಮೃಗಶಿರಾ ನಕ್ಷತ್ರದಲ್ಲಿ ಜನಿಸಿದವನು ಚಂಚಲವಾದ ಮನಸ್ಸು ಉಳ್ಳವನು ಚತುರನು, ಭಯಾಗ್ರಸ್ಥನು, ಬುದ್ಧಿವಂತನು, ಉತ್ಸಾಹ ಉಳ್ಳವನು, ಧನವಂತನು, ಸುಖ, ಭೋಗ ಇತ್ಯಾದಿ ಉಳ್ಳವನು ಆಗುತ್ತಾನೆ.

**ಆರ್ದ್ರಾ:** ಆರ್ದ್ರಾ ನಕ್ಷತ್ರದಲ್ಲಿ ಜನಿಸಿದವನು ಅಹಂಕಾರ ಉಳ್ಳವನು, ಹಟವಾದಿ, ಕೃತಘ್ನನು, ಹಿಂಸ್ರಸ್ವಭಾವದವನು, ಪಾಪಕರ್ಮ ನಿರತನು ಆಗುತ್ತಾನೆ.

**ಪುನರ್ವಸು:** ಪುನರ್ವಸು ನಕ್ಷತ್ರದಲ್ಲಿ ಜನಿಸಿದವನು ಉತ್ತಮ ಅಂತಃಕರಣ ಉಳ್ಳವನು, ಸಹಿಷ್ಣುವು, ಸುಖವಂತನು, ಉತ್ತಮ ಗುಣ ಉಳ್ಳವನು, ಅನಾರೋಗ್ಯ ಉಳ್ಳವನು, ಹೆಚ್ಚು ಬಾಯಾರಿಕೆ ಉಳ್ಳವನು, ಅತಿ ಆಶೆ ಉಳ್ಳವನು ಆಗುತ್ತಾನೆ.

**ಪುಷ್ಯಾ:** ಪುಷ್ಯಾ ನಕ್ಷತ್ರದಲ್ಲಿ ಜನಿಸಿದವನು ಸಮಾಧಾನ ಉಳ್ಳವನು, ಸೌಭಾಗ್ಯವಂತನು, ವಿದ್ಯಾವಂತನು, ಧನವಂತನು, ಧರ್ಮವನ್ನು ಆಶ್ರಯಿಸುವವನು ಆಗುತ್ತಾನೆ.

ಆಶ್ಲೇಷಾ: ಆಶ್ಲೇಷಾ ನಕ್ಷತ್ರದಲ್ಲಿ ಜನಿಸಿದವನು ಹಟವಾದಿಯು, ಮೋಸಗಾರನು ಪಾಪಿಷ್ಟನು, ಕೃತಘ್ನನು, ಧೂರ್ತನು ಆಗುತ್ತಾನೆ.

ಮಖಾ: ಮಖಾ ನಕ್ಷತ್ರದಲ್ಲಿ ಜನಿಸಿದವನು ಅಧಿಕವಾದ ಧನ ಸಂಪತ್ತು ಧಾನ್ಯ ಇತ್ಯಾದಿ ಉಳ್ಳವನು. ತುಂಬಾ ಸೇವಕರು ಉಳ್ಳವನು. ಭೋಗವಂತನು. ಗುರುಹಿರಿಯರನ್ನು ಪೂಜಿಸುವವನು. ದೇವಭಕ್ತನು. ಮಹತ್ಕಾರ್ಯಗಳನ್ನು ಸಾಧಿಸುವವನು ಆಗುತ್ತಾನೆ.

ಹುಬ್ಬಾ: ಹುಬ್ಬಾ ನಕ್ಷತ್ರದಲ್ಲಿ ಜನಿಸಿದವನು ಮಧುರವಾದ ಮಾತು ಉಳ್ಳವನು. ದಾನಶೀಲನು, ಕಾಂತಿಯುತನು, ಪ್ರಯಾಣದಲ್ಲಿ ಆಸಕ್ತಿ ಉಳ್ಳವನು, ಸರಕಾರಿ ಹುದ್ದೆಯಲ್ಲಿರುವವನು ಆಗುತ್ತಾನೆ.

ಉತ್ತರಾ: ಉತ್ತರಾ ನಕ್ಷತ್ರದಲ್ಲಿ ಜನಿಸಿದವನು ಸೌಭಾಗ್ಯವಂತನು, ವಿದ್ಯಾವಂತನು. ಸ್ವಾರ್ಜಿತ ಧನ–ಸಂಪತ್ತು ಉಳ್ಳವನು, ಭೋಗವಂತನು, ಸುಖವಂತನು ಆಗುತ್ತಾನೆ.

ಹಸ್ತಾ: ಹಸ್ತಾನಕ್ಷತ್ರದಲ್ಲಿ ಜನಿಸಿದವನು ಉತ್ಸಾಹವಂತನು. ದಯೆ ಇಲ್ಲದವನು, ಧೈರ್ಯವಂತನು. ಮದ್ಯಪಾನಮಾಡುವವನು, ವಂಚಕನು ಆಗುತ್ತಾನೆ.

ಚಿತ್ರಾ: ಚಿತ್ರಾನಕ್ಷತ್ರದಲ್ಲಿ ಜನಿಸಿದವನು ಸುಂದರವಾದ ಅಂಗಾಂಗ ಉಳ್ಳವನು, ವಿಧವಿಧದ ವಸ್ತ್ರಾಭರಣಗಳನ್ನು ಧರಿಸುವವನು ಆಗುತ್ತಾನೆ.

ಸ್ವಾತಿ: ಸ್ವಾತಿನಕ್ಷತ್ರದಲ್ಲಿ ಜನಿಸಿದವನು ಉತ್ತಮವಾದ ಅಂತಃಕರಣ ಉಳ್ಳವನು. ಜಿತೇಂದ್ರಿಯನು. ವ್ಯಾಪಾರಿಯೂ, ದಯಾವಂತನು, ಮಧುರವಾದ ಮಾತುಗಳನ್ನು ಆಡುವವನು, ಧರ್ಮಪರಾಯಣನು ಆಗುತ್ತಾನೆ.

ವಿಶಾಖಾ: ವಿಶಾಖಾ ನಕ್ಷತ್ರದಲ್ಲಿ ಜನಿಸಿದವನು ಮತ್ಸರ ಉಳ್ಳವನು, ಲೋಭಿಯು, ಕಾಂತಿಯುತನು, ಮಾತುಗಾರನು, ಕಲಹವಂತನು ಆಗುತ್ತಾನೆ.

ಅನುರಾಧಾ: ಅನುರಾಧಾ ನಕ್ಷತ್ರದಲ್ಲಿ ಜನಿಸಿದವನು ಧನವಂತನು, ವಿದೇಶಗಳಲ್ಲಿ ವಾಸಿಸುವವನು, ಹೆಚ್ಚು ಹಸಿವೆ ಉಳ್ಳವನು, ಪರಿಭ್ರಮಣಶೀಲನು ಆಗುತ್ತಾನೆ.

ಜ್ಯೇಷ್ಠಾ : ಜ್ಯೇಷ್ಠಾ ನಕ್ಷತ್ರದಲ್ಲಿ ಜನಿಸಿದವನು ಹೆಚ್ಚು ಮಿತ್ರರು ಇಲ್ಲದವನು, ತೃಪ್ತಿವಂತನು, ಧರ್ಮಕಾರ್ಯನಿರತನು. ಶೀಘ್ರ ಕೋಪ ಉಳ್ಳವನು ಆಗುತ್ತಾನೆ.

ಮೂಲಾ : ಮೂಲಾ ನಕ್ಷತ್ರದಲ್ಲಿ ಜನಿಸಿದವನು ಮಾನವಂತನು, ಧನವಂತನು. ಸುಖವಂತನು, ಸ್ಥಿರವಾದ ಮನಸ್ಸು ಉಳ್ಳವನು. ದಯಾವಂತನು ಆಗುತ್ತಾನೆ.

ಪೂರ್ವಾಷಾಢಾ : ಪೂರ್ವಾಷಾಢಾ ನಕ್ಷತ್ರದಲ್ಲಿ ಜನಿಸಿದವನು ಸುಖ ಸಂತೋಷಉಳ್ಳವನು, ಸುಗಮ ದಾಂಪತ್ಯ ಜೀವನ ಉಳ್ಳವನು, ಮಾನವಂತನು. ಉತ್ತಮ ಮಿತ್ರರು ಉಳ್ಳವನು ಆಗುತ್ತಾನೆ.

ಉತ್ತರಾಷಾಢಾ : ಉತ್ತರಾಷಾಢಾ ನಕ್ಷತ್ರದಲ್ಲಿ ಜನಿಸಿದವನು ವಿನಯವಂತನು, ಧರ್ಮಜ್ಞನು, ಅನೇಕ ಮಿತ್ರರು ಇರುವವನು, ಕೃತಜ್ಞನು, ಸೌಭಾಗ್ಯವಂತನು. ಆಗುತ್ತಾನೆ.

ಶ್ರವಣಾ : ಶ್ರವಣಾ ನಕ್ಷತ್ರದಲ್ಲಿ ಜನಿಸಿದವನು ಐಶ್ವರ್ಯವಂತನು, ಮಾನಿಸಲ್ಪಡುವವನು, ಉದಾರಿಯು, ಕೀರ್ತಿವಂತನು, ಧನವಂತನು ಆಗುತ್ತಾನೆ.

ಧನಿಷ್ಠಾ : ಧನಿಷ್ಠಾ ನಕ್ಷತ್ರದಲ್ಲಿ ಜನಿಸಿದವನು ಪರಾಕ್ರಮ ಉಳ್ಳವನು, ಸಂಗೀತಪ್ರಿಯನು, ಔದಾರ್ಯವಂತನು, ಧನಸಂಪತ್ತಿನ ಅಭಿಲಾಷೆ ಉಳ್ಳವನು ಆಗುತ್ತಾನೆ.

ಶತಭೀಷಾ : ಶತಭೀಷಾ ನಕ್ಷತ್ರದಲ್ಲಿ, ಜನಿಸಿದವನು, ವಾಕ್‌ಶಕ್ತಿ ಉಳ್ಳವನು, ವ್ಯಸನವಂತನು, ವೈರಿಮರ್ದನನು, ಸಾಹಸಕಾರ್ಯಗಳನ್ನು ಮಾಡುವವನು, ಪರರಿಂದ ವಶಮಾಡಲ್ಪಡದವನು ಆಗುತ್ತಾನೆ.

ಪೂರ್ವಾಭಾದ್ರಾ: ಪೂರ್ವಾಭಾದ್ರಾ ನಕ್ಷತ್ರದಲ್ಲಿ ಜನಿಸಿದವನು ಸ್ತ್ರೀಯರಿಂದ ಜಯಿಸಲ್ಪಟ್ಟವನು, ಧನವಂತನು, ಕುಶಲನು, ಜಿಪುಣನು ಆಗುತ್ತಾನೆ.

ಉತ್ತರಾಭಾದ್ರಾ: ಉತ್ತರಾಭಾದ್ರಾ ನಕ್ಷತ್ರದಲ್ಲಿ ಜನಿಸಿದವನು ಕಾಲಕ್ಕೆ ಸರಿಯಾಗಿ ನಡೆಯುವವನು, ಸುಖವಂತನು, ಉತ್ತಮ ಸಂತಾನ ಉಳ್ಳವನು, ಶತ್ರುಗಳು ಉಳ್ಳವನು, ಧಾರ್ಮಿಕನು ಆಗುತ್ತಾನೆ.

ರೇವತೀ : ರೇವತೀ ನಕ್ಷತ್ರದಲ್ಲಿ ಜನಿಸಿದವನು ಸುಂದರವಾದ ಮತ್ತು ಪರಿಪೂರ್ಣವಾದ ಅಂಗಾಂಗ ಉಳ್ಳವನು, ಸೌಭಾಗ್ಯವಂತನು, ಶೌರ್ಯವಂತನು, ನಿರ್ಮಲವಾಗಿ ಇರುವವನು, ಧನವಂತನು, ಆಗುತ್ತಾನೆ.

## ೩೫. ಸೂರ್ಯನ ರಾಶಿಸ್ಥಿತ ಫಲ

ಮೇಷರಾಶಿಯಲ್ಲಿ ಸೂರ್ಯನು ಇರುವಾಗ ಜನಿಸಿದವನು ಪ್ರಖ್ಯಾತನು, ಬುದ್ಧಿವಂತನು, ಸಂಚಾರಶೀಲನು, ಸ್ವಲ್ಪ ಧನ ಉಳ್ಳವನು, ಆಯುಧಗಳನ್ನು ಹೊಂದಿದವನು ಆಗುತ್ತಾನೆ. ಸೂರ್ಯನು ಪರಮೋಚ್ಚದಲ್ಲಿ ಇರುವಾಗ ( ಮೇಷದ 10° ) ಜನಿಸಿದವನು, ಸ್ವಪ್ರಯತ್ನದಿಂದ ಅಭಿವೃದ್ಧಿಹೊಂದಿ, ಧನ ಸಂಪತ್ತನ್ನು ಗಳಿಸುತ್ತಾನೆ. ಉನ್ನತ ಅಧಿಕಾರವನ್ನು ಪಡೆದು ಕೀರ್ತಿವಂತನು ಆಗುತ್ತಾನೆ.

ವೃಷಭರಾಶಿಯಲ್ಲಿ ಸೂರ್ಯನು ಇರುವಾಗ ಜನಿಸಿದವನು ಸುಗಂಧ ದ್ರವ್ಯ ವಸ್ತ್ರ, ಇತ್ಯಾದಿಗಳ ಮಾರಾಟದಿಂದ ಜೀವಿಸುತ್ತಾನೆ. ಸ್ತ್ರೀಯರನ್ನು ದ್ವೇಷಿಸುತ್ತಾನೆ. ವಾದ್ಯ ಗಾಯನಗಳಲ್ಲಿ ನುರಿತವನು ಆಗುತ್ತಾನೆ.

ಮಿಥುನ ರಾಶಿಯಲ್ಲಿ ರವಿ ಇರುವಾಗ ಜನಿಸಿದವನು ವಿದ್ಯಾವಂತನು, ಜ್ಯೋತಿಶ್ಶಾಸ್ತ್ರ ಬಲ್ಲವನು, ಧನವಂತನು ಆಗುತ್ತಾನೆ.

ಕರ್ಕಟಕ ರಾಶಿಯಲ್ಲಿ ರವಿ ಇರುವಾಗ ಜನಿಸಿದವನು ಕ್ರೂರನು, ಬಡವನು, ಪರರಸೇವೆಯನ್ನು ಮಾಡುವವನು, ಭಾರವಾದ, ನಿಕೃಷ್ಟ ಕೆಲಸಗಳನ್ನು ಮಾಡುವವನು, ದುಃಖದಿಂದ ಕೂಡಿದವನು ಆಗುತ್ತಾನೆ.

ಸಿಂಹ ರಾಶಿಯಲ್ಲಿ ರವಿ ಇರುವಾಗ ಜನಿಸಿದವನು ಪರ್ವತ ಪ್ರದೇಶ, ಅರಣ್ಯ, ಗೋ ಸಂಪತ್ತಿನಲ್ಲಿ ಪ್ರೇಮಉಳ್ಳವನು, ಬಲಾಢ್ಯನು, ಬುದ್ಧಿಹೀನನು, ಆಗುತ್ತಾನೆ.

ಕನ್ಯಾರಾಶಿಯಲ್ಲಿ ರವಿ ಇರುವಾಗ ಜನಿಸಿದವನು ಪುಸ್ತಕ, ಕಾವ್ಯ, ಗಣಿತ, ಚಿತ್ರಗಳನ್ನು ರಚಿಸುವವನು, ಜ್ಞಾನವಂತನು, ಸ್ತ್ರೀಯರಂತೆ ಸುಂದರವಾದ ಮತ್ತು ಕೋಮಲವಾದ ಶರೀರಉಳ್ಳವನು ಆಗುತ್ತಾನೆ.

ತುಲಾರಾಶಿಯಲ್ಲಿ ರವಿ ಇರುವಾಗ ಜನಿಸಿದವನು ಮದ್ಯಪಾನ ಮಾಡುವವನು, ಮತ್ತು ವಿಕ್ರಯಿಸುವವನು. ಶ್ರಮವಾದ ಕೆಲಸಗಳನ್ನು ಮಾಡುವವನು, ತ್ಯಾಜ್ಯಕಾರ್ಯಗಳನ್ನು ಮಾಡುವವನು ಆಗುತ್ತಾನೆ.

ವೃಶ್ಚಿಕ ರಾಶಿಯಲ್ಲಿ ರವಿ ಇರುವಾಗ ಜನಿಸಿದವನು ಕ್ರೂರಸ್ವಭಾವದವನು. ಸಾಹಸ ಕಾರ್ಯಗಳನ್ನು ಮಾಡುವವನು. ವಿಷ ವಸ್ತುಗಳಿಂದ ಮತ್ತು ಶಸ್ತ್ರಾಸ್ತ್ರಗಳಿಂದ ಧನಸಂಪತ್ತನ್ನು ಗಳಿಸುತ್ತಾನೆ.

ಧನುರಾಶಿಯಲ್ಲಿ ರವಿ ಇರುವಾಗ ಜನಿಸಿದವನು ಸತ್ಪುರುಷರಿಂದ ಪೂಜಿಸಲ್ಪಡುವವನು, ಧನವಂತನು, ಕೋಪಿಷ್ಟನು, ವೈದ್ಯಕೀಯವನ್ನು ಮತ್ತು ಶಿಲ್ಪಕಲೆಯನ್ನು ಬಲ್ಲವನು ಆಗುತ್ತಾನೆ.

ಮಕರರಾಶಿಯಲ್ಲಿ ರವಿ ಇರುವಾಗ ಜನಿಸಿದವನು ನೀಚಕೆಲಸಗಳನ್ನು ಮಾಡುವವನು. ಅಜ್ಞಾನಿಯು. ಹೀನವಾದ ವ್ಯಾಪಾರ ವ್ಯವಹಾರಗಳನ್ನು ಮಾಡುವವನು, ಅಲ್ಪವಾದ ಸಂಪತ್ತು ಉಳ್ಳವನು. ಲೋಭಿಯು. ಪರರ ಸಂಪತ್ತನ್ನು ಅನುಭವಿಸುವವನು. ಆಗುತ್ತಾನೆ.

ಕುಂಭರಾಶಿಯಲ್ಲಿ ರವಿ ಇರುವಾಗ ಜನಿಸಿದವನು ನೀಚಕಾರ್ಯಗಳನ್ನು ಮಾಡುವವನು. ಪುತ್ರ ಭಾಗ್ಯಹೀನನು. ಧನರಹಿತನು. ಆಗುತ್ತಾನೆ.

ಮೀನ ರಾಶಿಯಲ್ಲಿ ರವಿ ಇರುವಾಗ ಜನಿನಿದವನು ಜಲಜನ್ಯ ವಸ್ತುಗಳ ವ್ಯಾಪಾರದಿಂದ ದ್ರವ್ಯವನ್ನು ಸಂಪಾದಿಸುತ್ತಾನೆ, ಮತ್ತು ಸ್ತ್ರೀಯರಿಂದ ಭಾಗ್ಯ ಉಳ್ಳವನು ಆಗುತ್ತಾನೆ.

## ೩೬. ಚಂದ್ರನ ರಾಶಿಸ್ಥಿತ ಫಲ

**ಮೇಷರಾಶಿ :** ಮೇಷರಾಶಿಯಲ್ಲಿ ಚಂದ್ರನು ಇರುವಾಗ ಜನಿಸಿದವನು ಉರುಟಾದ ತಾಮ್ರವರ್ಣದ ಕಣ್ಣುಗಳು ಉಳ್ಳವನು, ಬಿಸಿಯಾದ ಆಹಾರ ಸೇವಿಸುವವನು. ಅಲ್ಪ ಆಹಾರ ಸೇವಿಸುವವನು, ಕ್ರೋಧ ಉಳ್ಳವನು ಆದರೆ ಶೀಘ್ರ ಸಮಾಧಾನ ಹೊಂದುವವನು, ಹೆಚ್ಚಾಗಿ ಸಂಚಾರದಲ್ಲಿ ಇರುವವನು, ಹೆಚ್ಚು ಆಶೆ ಉಳ್ಳವನು, ಕಾಲುಗಳಲ್ಲಿ ಬಲ ಕಮ್ಮಿ ಇರುವವನು. ವೃದ್ಧಿಕ್ಷಯ ಧನ ಉಳ್ಳವನು, ಧೈರ್ಯವಂತನು. ಪರಾಕ್ರಮಿಯು, ಸ್ತ್ರೀಯರಿಂದ ಪ್ರೇಮಿಸ

ಲ್ಪಡುವವನು, ಕರ್ಮಕುಶಲನು, ಸ್ವಚ್ಛತೆಯನ್ನು ನಿರ್ಲಕ್ಷಿಸುವವನು, ಶಿರಸ್ಸಿನಲ್ಲಿ ಶಸ್ತ್ರದ ಅಥವಾ ವ್ರಣದ ಚಿಹ್ನೆ ಇರುವವನು, ಅಹಂಭಾವ ಉಳ್ಳವನು, ಕುಟುಂಬದಲ್ಲಿ ಮುಂದಾಳು, ಕೈಯಲ್ಲಿ ಶಕ್ತಿರೇಖೆ ಇರುವವನು, ಚಂಚಲ ಸ್ವಭಾವದವನು, ನೀರನ್ನು ಕಂಡರೆ ಭಯಪಡುವವನು, ಆಗುತ್ತಾನೆ.

ವೃಷಭರಾಶಿ: ವೃಷಭರಾಶಿಯಲ್ಲಿ ಚಂದ್ರನು ಇರುವಾಗ ಜನಿಸಿದವನು, ಸುಂದರವಾದ ಶರೀರ ಉಳ್ಳವನು, ಕ್ರೀಡಾಪಟು, ಅಗಲವಾದ ಮುಖಉಳ್ಳವನು, ಬೆನ್ನಿನ ಬದಿಯಲ್ಲಿ ಗುರುತು, ಚಿಹ್ನೆ ಉಳ್ಳವನು, ಉದಾರ ಸ್ವಭಾವದವನು, ಕಷ್ಟ ಸಹಿಷ್ಣುವು, ಅಧಿಕಾರ ಉಳ್ಳವನು, ಹೆಚ್ಚು ಸ್ತ್ರೀ ಸಂತತಿ ಉಳ್ಳವನು, ಕಫ ಪ್ರಕೃತಿಯವನು, ಕುಟುಂಬದಲ್ಲಿ ಹಿರಿಯನು, ಭಾಗ್ಯವಂತನು, ದಯಾವಂತನು, ಹೆಚ್ಚು ಹಸಿವ ಉಳ್ಳವನು, ಹೆಂಗಸರಿಂದ ಪ್ರೀತಿಸಲ್ಪಡುವವನು, ದೀರ್ಘಕಾಲ ಮಿತ್ರರು ಉಳ್ಳವನು, ಆಗುತ್ತಾನೆ. ವೃಷಭವು ಚಂದ್ರನ ಉಚ್ಚ ರಾಶಿ ಆಗಿರುತ್ತದೆ. ಸಾಮಾನ್ಯವಾಗಿ ವೃಷಭರಾಶಿಯವರ ಶೈಶವ ಕಾಲವು ಕಷ್ಟಮಯ ಆಗಿರುತ್ತದೆ, ಆದರೆ ಯೌವನ ಮತ್ತು ವಾರ್ಧಿಕ್ಯ ಕಾಲದಲ್ಲಿ ಸುಖವಂತರು ಆಗುತ್ತಾರೆ.

ಮಿಥುನರಾಶಿ : ಮಿಥುನದಲ್ಲಿ ಚಂದ್ರನು ಇರುವಾಗ ಹುಟ್ಟಿದವನು ಸ್ತ್ರೀಯರಲ್ಲಿ ವ್ಯಾಮೋಹ ಉಳ್ಳವನು, ರತಿಕ್ರೀಡಾಕುಶಲನು, ಕೆಂಪಾದ ಕಣ್ಣುಗಳು ಉಳ್ಳವನು, ವಿದ್ಯಾವಂತನು, ರಾಯಭಾರಿ, ವಕ್ರವಾದ ಕೂದಲು ಉಳ್ಳವನು, ಚುರುಕಾದ ಬುದ್ಧಿ ಉಳ್ಳವನು, ಹಾಸ್ಯಜ್ಞನು, ಜೂಜಾಡುವವನು, ನಗುಮೊಗಉಳ್ಳವನು, ಮೃದುವಾದ ಮಾತುಗಳನ್ನು ಆಡುವವನು ಸುಂದರವಾದ ರೂಪಉಳ್ಳವನು, ರುಚಿಕರವಾದ ಆಹಾರ ಸೇವಿಸುವವನು, ಸಂಗೀತ ಪ್ರಿಯನು, ನಾಟ್ಯ ಬಲ್ಲವನು, ಅಹಂಭಾವಿಯು ಆಗುತ್ತಾನೆ.

ಕರ್ಕಾಟಕರಾಶಿ : ಕರ್ಕಾಟಕರಾಶಿಯಲ್ಲಿ ಚಂದ್ರನು ಇರುವಾಗ ಜನಿಸಿದವನು, ವೇಗವಾಗಿ ಚಲಿಸುವವನು, ಶೀಘ್ರವಾಗಿ ಕಾರ್ಯಗಳನ್ನು ಮಾಡುವವನು, ಎತ್ತರವಾದ ಜಘನಉಳ್ಳವನು, ಸ್ತ್ರೀಯರಿಂದ ಪರಾಜಿತನಾದವನು, ಶಾಸ್ತ್ರವನ್ನು ಬಲ್ಲವನು, ಉತ್ತಮವಾದ ಮನೆಉಳ್ಳವನು, ಗಿಡ್ಡಪ್ರಕೃತಿಯವನು ಬಲಿಷ್ಠವಾದ ಕುತ್ತಿಗೆ ಉಳ್ಳವನು, ನೀರು ಮತ್ತು ಉದ್ಯಾನಗಳಲ್ಲಿ ಪ್ರೀತಿ

ಉಳ್ಳವನು, ಆಗುತ್ತಾನೆ. ಸಾಮಾನ್ಯವಾಗಿ ಕರ್ಕಟಕರಾಶಿಯವರ ಧನ–ಸಂಪತ್ತು ಚಂದ್ರನಂತೆ ವೃದ್ಧಿ ಕ್ಷಯ ಆಗುತ್ತದೆ, ಸಿಹಿಯಾದ ಮಾತುಗಳಿಂದ ಇವರನ್ನು ವಶಮಾಡಬಹುದು.

ಸಿಂಹರಾಶಿ : ಸಿಂಹರಾಶಿಯಲ್ಲಿ ಚಂದ್ರನು ಇರುವಾಗ ಜನಿಸಿದವನು. ತೀಕ್ಷ್ಣ ಸ್ವಭಾವದವನು, ಕೋಪಉಳ್ಳವನು. ದಪ್ಪವಾದ ಗಲ್ಲಉಳ್ಳವನು ಅಗಲ ವಾದ ಮುಖಉಳ್ಳವನು, ಪಿಂಗಲ ಕಣ್ಣು ಉಳ್ಳವನು, ಅಲ್ಪ ಸಂತತಿಯುವನು, ಸ್ತ್ರೀಯರನ್ನು ದ್ವೇಷಿಸುವವನು. ವನ, ಗುಡ್ಡ, ಕಾಡು, ಪರ್ವತ ಇತ್ಯಾದಿ ಸಂಚಾರ ಪ್ರಿಯನು, ಮಾಂಸಾಹಾರದಲ್ಲಿ ಪ್ರೀತಿಉಳ್ಳವನು, ಮಾಡಬಾರದ ಕಷ್ಟವಾದ ಕಾರ್ಯಗಳನ್ನು ಮಾಡಬಲ್ಲವನು, ಬಾಯಾರಿಕೆ, ಹೊಟ್ಟೆನೋವು, ಹಲ್ಲುನೋವು, ಮತ್ತು ಮಾನಸಿಕ ಪೀಡೆಉಳ್ಳವನು, ಅಹಂಭಾವ ಉಳ್ಳವನು, ಉದಾರನು, ಪರಾಕ್ರಮಿಯು, ದೃಢವಾದ ಬುದ್ಧಿ ಉಳ್ಳವನು, ಮತ್ತು ಮಾತೃ ವಾಕ್ಯ ಪರಿಪಾಲಕನು ಆಗುತ್ತಾನೆ.

ಕನ್ಯಾರಾಶಿ : ಕನ್ಯಾರಾಶಿಯಲ್ಲಿ ಚಂದ್ರನು ಇರುವಾಗ ಜನಿಸಿದವನು, ಲಜ್ಜಾವಂತನು, ಆಲಸಿಯು, ಸುಂದರವಾದ ದೃಷ್ಟಿ ಮತ್ತು ಚಲನೆ ಉಳ್ಳವನು, ಬಲಿಷ್ಠ ಭುಜಗಳು ಉಳ್ಳವನು, ಸುಖವಂತನು, ಸತ್ಕರತನು, ಕಲಾಪ್ರಿಯನು, ನೃತ್ಯಸಂಗೀತಗಳಲ್ಲಿ ನಿಪುಣನು, ಶಾಸ್ತ್ರಬಲ್ಲವನು, ಧರ್ಮದಂತೆ ನಡೆಯುವವನು, ಮೇಧಾವಂತನು, ರತಿಕ್ರೀಡಾನಿಪುಣನು, ಧನ, ಗೃಹಾದಿಗಳನ್ನು ಪರರ ಧನದಿಂದ ಪಡೆಯುವವನು, ಹೆಚ್ಚು ಸ್ತ್ರೀಸಂತತಿ ಉಳ್ಳವನು, ವಿದೇಶ ಸಂಚಾರ ಮಾಡು ವವನು, ಮತ್ತು ಮಧುರವಾದ ಮಾತುಗಳನ್ನು ಆಡುವವನು ಆಗುತ್ತಾನೆ.

ತುಲಾರಾಶಿ : ತುಲಾರಾಶಿಯಲ್ಲಿ ಚಂದ್ರನು ಇರುವಾಗ ಜನಿಸಿದವನು ದೇವತಾರಾಧನೆ, ಗುರುಹಿರಿಯರ ಸೇವೆ, ಸತ್ಪುರುಷರ ಮತ್ತು ಬ್ರಾಹ್ಮಣರ ಆದರವನ್ನು ಮಾಡುವವನು, ಜ್ಞಾನವಂತನು, ಮೇಧಾವಿ, ನಿರ್ಮಲಚಿತ್ತನು, ಉತ್ತಮವಾದ ಶರೀರಉಳ್ಳವನು, ಮಾನವಂತನು, ಮೆಲ್ಲಗೆ ಚಲಿಸುವವನು, ಪ್ರಯಾಣದಲ್ಲಿ ಅಭಿರುಚಿ ಉಳ್ಳವನು, ಧನವಂತನು, ಅವಯವಗಳಲ್ಲಿ ನ್ಯೂನತೆ ಉಳ್ಳವನು, ವ್ಯಾಪಾರ ವ್ಯವಹಾರದಲ್ಲಿ ಕುಶಲನು, ಹೆಸರುವಂತನು, ಕುಟುಂಬ, ಪರಿವಾರಕ್ಕೆ ಸಹಾಯಕನು, ಆದರೆ ಅವರಿಂದ ದೂಷಿಸಲ್ಪಡುವವನು ಆಗುತ್ತಾನೆ.

**ವೃಶ್ಚಿಕರಾಶಿ :** ವೃಶ್ಚಿಕರಾಶಿಯಲ್ಲಿ ಚಂದ್ರನಿರುವಾಗ ಜನಿಸಿದವನು, ಅಗಲವಾದ ಕಣ್ಣು ಮತ್ತು ಎದೆಉಳ್ಳವನು, ಉರುಟಾದ ತೊಡೆಗಳು ಉಳ್ಳವನು, ಗುರುಹಿರಿಯರಿಂದ, ತಂದೆಯಿಂದ ದೂರ ಇರುವವನು, ಬಾಲ್ಯಕಾಲದಲ್ಲಿ ರೋಗಪೀಡಿತನು. ಸಮಾಜದಲ್ಲಿ ಗಣ್ಯವ್ಯಕ್ತಿ, ಕ್ರೂರಸ್ವಭಾವದವನು, ಮತ್ಸ್ಯ, ವಜ್ರ, ಪಕ್ಷಿರೇಖೆಗಳು ಉಳ್ಳವನು, ಆಗುವನು, ವೃಶ್ಚಿಕರಾಶಿಯು ಚಂದ್ರನ ನೀಚರಾಶಿ ಆಗಿರುತ್ತದೆ. ಸಾಮಾನ್ಯವಾಗಿ ವೃಶ್ಚಿಕರಾಶಿಯು ಚಂದ್ರನು ಮಧ್ಯ ವಯಸ್ಸಿನಲ್ಲಿ ಸುಖವನ್ನು, ಆದಿ.ಅಂತ್ಯಕಾಲದಲ್ಲಿ ದುಃಖವನ್ನು ನೀಡುತ್ತಾನೆ.

**ಧನುರಾಶಿ:** ಧನುರಾಶಿಯಲ್ಲಿ ಚಂದ್ರನಿರುವಾಗ ಜನಿಸಿದವನು, ಉದ್ದವಾದ ಮುಖ ಮತ್ತು ಕುತ್ತಿಗೆ ಉಳ್ಳವನು ಪಿತ್ರಾರ್ಜಿತ ಧನಉಳ್ಳವನು, ಉದಾರವಾದ ಬುದ್ಧಿಉಳ್ಳವನು ಕವಿತಾಶಕ್ತಿ ಉಳ್ಳವನು, ಬಲಿಷ್ಠನು, ವಾಕ್ ಚಾತುರ್ಯ ಉಳ್ಳವನು, ಕರ್ಮನಿರತನು. ಕಲಾನಿಪುಣನು, ಮಲಿನನು, ಮೇಧಾವಿಯು, ಧರ್ಮಶಾಸ್ತ್ರವನ್ನು ಬಲ್ಲವನು, ಕುಟುಂಬ ಕಲಹ ಉಳ್ಳವನು ಆಗುತ್ತಾನೆ. ದಂಡೋಪಾಯದಿಂದ ಇವರನ್ನು ವಶಮಾಡಲು ಆಗುವುದಿಲ್ಲ ಆದರೆ ಉಪಯದಿಂದ ಇವರನ್ನು ವಶಮಾಡಬಹುದು.

**ಮಕರರಾಶಿ:** ಮಕರರಾಶಿಯಲ್ಲಿ ಚಂದ್ರನಿರುವಾಗ ಜನಿಸಿದವನು, ಸದಾ ಸಂಕಷ್ಟಗಳಲ್ಲಿ ನಿರತನಾಗಿ ಇರುವವನು, ದಾನ ಧರ್ಮದ ಹೆಸರಿನಲ್ಲಿ ಮೋಸ, ವಂಚನೆ ಇತ್ಯಾದಿಗಳಿಂದ ಧನಗಳಿಸುವವನು, ಕೃಶವಾದ ಕಾಲು ಮತ್ತು ತೊಡೆಗಳು ಮತ್ತು ಸುಂದರವಾದ ಕಣ್ಣುಗಳು, ಉಳ್ಳವನು, ಉತ್ತಮ ಮೇಧಾಶಕ್ತಿ ಉಳ್ಳವನು, ಸೌಭಾಗ್ಯವಂತನು, ಸಂಪತ್ತು ಉಳ್ಳವನು, ಆಲಸಿಯು, ಶೀತವನ್ನು ತಡೆಯಲು ಅಸಮರ್ಥನು, ಸಂಚಾರದಲ್ಲಿ ಆಸಕ್ತಿಉಳ್ಳವನು, ಬಲಿಷ್ಠನು, ಕವಿತಾಶಕ್ತಿಉಳ್ಳವನು, ಲೋಭಿಯು, ಹೀನಜಾತಿಯ ಸ್ತ್ರೀಯರಲ್ಲಿ ಮತ್ತು ವೃದ್ಧ ಸ್ತ್ರೀಯರಲ್ಲಿ ಆಸಕ್ತಿ ಉಳ್ಳವನು, ನಿರ್ಲಜ್ಜನು, ನಿರ್ದಯಿಯು ಆಗುತ್ತಾನೆ.

**ಕುಂಭರಾಶಿ :** ಕುಂಭರಾಶಿಯಲ್ಲಿ ಚಂದ್ರನು ಇರುವಾಗ ಜನಿಸಿದವನು ಉದ್ದವಾದ ಕುತ್ತಿಗೆ ಉಳ್ಳವನು, ಉಬ್ಬಿದ ನರಗಳು, ತುಂಬಾ ರೋಮ ಇರುವ ದೀರ್ಘವಾದ ಶರೀರ ಉಳ್ಳವನು, ಕಿವುಡನು, ಪರಸ್ತ್ರೀ, ಪರದ್ರವ್ಯ ಮತ್ತು ಪಾಪಕಾರ್ಯದಲ್ಲಿ ಆಸಕ್ತಿ ಉಳ್ಳವನು, ಕೆಲವೊಮ್ಮೆ ಉತ್ತಮ ಸ್ಥಿತಿಯಲ್ಲಿದ್ದರೆ,

ಕೆಲವೊಮ್ಮೆ ಹಾಳಾದ ನಷ್ಟಸ್ಥಿತಿಯಲ್ಲಿ ಇರುವವನು, ಇಷ್ಟಮಿತ್ರ, ಸುಗಂಧ ದ್ರವ್ಯ, ಅಲಂಕಾರ ವಸ್ತುಗಳಲ್ಲಿ ಪ್ರೀತಿಉಳ್ಳವನು, ಮತ್ತು ಕಷ್ಟ ಸಹಿಷ್ಣುವು ಆಗುತ್ತಾನೆ.

ಮೀನರಾಶಿ : ಮೀನರಾಶಿಯಲ್ಲಿ ಚಂದ್ರನಿರುವಾಗ ಜನಿಸಿದವನು ಜಲ ಜನ್ಯ ಅಥವಾ ಜಲಸಂಬಂಧ ವ್ಯಾಪರದಿಂದ ದ್ರವ್ಯಗಳಿಸುತ್ತಾನೆ, ಇತರರ ಧನವನ್ನು ಅನುಭವಿಸುವವನು, ವಸ್ತ್ರ, ಅಲಂಕಾರ ದುತ್ತು ಹೆಂಡತಿಯಲ್ಲಿ ಆಸಕ್ತಿ ಉಳ್ಳವನು, ಕಾಂತಿಯುತ ಶರೀರ ಉಳ್ಳವನು, ಮಾನವಂತನು, ಬುದ್ಧಿವಂತನು, ಸ್ತ್ರೀಯರಿಂದ ತ್ಯಜಿಸಲ್ಪಟ್ಟವನು, ಜೂಜು ನಿಕ್ಷೇಪಗಳಿಂದ ಹಣಗಳಿಸುವವನು, ಸುಖವಂತನು ಮತ್ತು ವಿದ್ಯಾವಂತನು ಆಗುತ್ತಾನೆ.

ಮೇಲೆ ಹೇಳಿದ ಚಂದ್ರನ ರಾಶಿಸ್ಥಿತ ಫಲವನ್ನು ನಿರ್ಣಯಿಸುವಾಗ ಚಂದ್ರ ಸ್ಥಿತರಾಶಿಯ ಬಲವನ್ನು, ಚಂದ್ರರಾಶ್ಯಾಧಿಪನ ಬಲವನ್ನು ಮತ್ತು ಚಂದ್ರನ ಬಲ ವನ್ನು ತಿಳಿದು ಫಲವನ್ನು ನಿರ್ಣಯಿಸಬೇಕು, ಮೂವರೂ ಬಲಿಷ್ಠರಾದರೆ ಮೇಲಿನ ಫಲಗಳು ಪೂರ್ಣವಾಗಿ ಸಂಭವಿಸುತ್ತದೆ. ಅನ್ಯಥಾ ಬಲಾಬಲಗಳಿಗೆ ಅನುಸಾರವಾಗಿ ಮೇಲಿನ ಫಲಗಳಲ್ಲಿ ವ್ಯತ್ಯಾಸ ಸಂಭವಿಸುತ್ತದೆ.

## ೩೭. ಕುಜನ ರಾಶಿಸ್ಥಿತ ಫಲ

ಮೇಷ ಮತ್ತು ವೃಶ್ಚಿಕ: ಕುಜನು ಸ್ವಕ್ಷೇತ್ರಗಳಾದ ಮೇಷ ಮತ್ತು ವೃಶ್ಚಿಕ ರಾಶಿಗಳಲ್ಲಿ ಇರುವಾಗ ಜನಿಸಿದವನು ರಾಜಪೂಜಿತನು, ಸಂಚಾರಶೀಲನು, ಸೇನಾಧಿಕಾರಿ, ವ್ಯಾಪಾರಿಯು, ಧನವಂತನು, ದೇಹದಲ್ಲಿ ಗಾಯ ಉಳ್ಳವನು, ಕಳ್ಳತನ ಮಾಡುವವನು, ಭೂಸಂಪತ್ತು ಉಳ್ಳವನು, ವಿಷಯಾಸಕ್ತಿ ಉಳ್ಳವನು ಆಗುತ್ತಾನೆ.

ವೃಷಭ ಮತ್ತು ತುಲಾ : ಕುಜನು ಶುಕ್ರಕ್ಷೇತ್ರಗಳಾದ ವೃಷಭ ಮತ್ತು ತುಲಾ ರಾಶಿಗಳಲ್ಲಿ ಇರುವಾಗ ಜನಿಸಿದವನು ಮಿತ್ರರ ಸದುಪದೇಶಗಳನ್ನು ಅಲಕ್ಷಿಸುವವನು, ಇಂದ್ರಜಾಲವಿದ್ಯೆ ಬಲ್ಲವನು, ಅಲಂಕಾರಪ್ರಿಯನು, ಭಯ ಉಳ್ಳವನು ಮತ್ತು ಜಡವಾದ ದೇಹ ಉಳ್ಳವನು ಆಗುತ್ತಾನೆ.

ಮಿಥುನ ಮತ್ತು ಕನ್ಯಾ : ಕುಜನು ಬುಧಕ್ಷೇತ್ರಗಳಾದ ಕನ್ಯಾ ಮತ್ತು ಮಿಥುನ ರಾಶಿಗಳಲ್ಲಿ ಇರುವಾಗ ಜನಿಸಿದವನು, ಕಾಂತಿಯುತನು, ರೂಪವಂತನು,

ಪುತ್ರವಂತನು, ಮಿತ್ರರನ್ನು ಕಳಕೊಂಡವನು. ಕೃತಜ್ಞನು, ಗಾಂಧರ್ವಯುದ್ಧ ಕುಶಲನು ವಾದ್ಯಸಂಗೀತ ಇತ್ಯಾದಿ ಬಲ್ಲವನು. ಲೋಭಿಯು, ಧನದಾಹ ಉಳ್ಳವನು ಭಯ ಇಲ್ಲದವನು ಆಗುತ್ತಾನೆ.

**ಕರ್ಕಟಕ :** ಕುಜನು ತನ್ನ ನೀಚರಾಶಿಯಾದ ಕರ್ಕಟಕ ರಾಶಿಯಲ್ಲಿ ಇರುವಾಗ ಜನಿಸಿದವನು ಧನವಂತನು. ಜಲಪ್ರಯಾಣಾದಿಗಳಿಂದ ಧನ, ಸಂಪತ್ತನ್ನು ಗಳಿಸುವವನು, ಮೇಧಾವಿಯು. ಅಂಗವೈಕಲ್ಯ ಉಳ್ಳವನು. ಖಲನು ಆಗುವನು.

**ಸಿಂಹ :** ರವಿ ಕ್ಷೇತ್ರವಾದ ಸಿಂಹರಾಶಿಯಲ್ಲಿ ಕುಜನು ಇರುವಾಗ ಜನಿಸಿದವನು ನಿರ್ಧನನಾಗಿ ಕಷ್ಟ, ದುಃಖಗಳನ್ನು ಅನುಭವಿಸುವವನು, ಪರ್ವತ, ವನ ಇತ್ಯಾದಿ ಸಂಚಾರಗಳಲ್ಲಿ ಆಸಕ್ತಿ ಉಳ್ಳವನು. ಅಲ್ಪ ಸ್ತ್ರೀಸುಖ ಮತ್ತು ಸಂತತಿ ಉಳ್ಳವನು ಆಗುತ್ತಾನೆ.

**ಮಕರ :** ಕುಜನು ಉಚ್ಚ ಕ್ಷೇತ್ರವಾದ ಮಕರರಾಶಿಯಲ್ಲಿ ಇರುವಾಗ ಜನಿಸಿದವನು. ಧನ ಉಳ್ಳವನು, ಅನೇಕ ಪುತ್ರರು ಉಳ್ಳವನು, ಮಹಾಖಂಡನು ಮತ್ತು ರಾಜತುಲ್ಯನು ಆಗುತ್ತಾನೆ,

**ಕುಂಭ :** ಶನಿಕ್ಷೇತ್ರವಾದ ಕುಂಭರಾಶಿಯಲ್ಲಿ ಕುಜನು ಇರುವಾಗ ಜನಿಸಿದವನು, ದುಃಖದಿಂದ ಪೀಡಿತನು, ಧನವನ್ನು ಕಳಕೊಂಡವನು, ಸಂಚಾರಶೀಲನು, ಅಸತ್ಯವನ್ನು ಮಾತಾಡುವವನು ಮತ್ತು ತೀಕ್ಷ್ಣ ಸ್ವಭಾವದವನು ಆಗುತ್ತಾನೆ,

**ಧನು ಮತ್ತು ಮೀನ :** ಗುರುಕ್ಷೇತ್ರವಾದ ಧನು ಮತ್ತು ಮೀನರಾಶಿಯಲ್ಲಿ ಕುಜನು ಇರುವಾಗ ಜನಿಸಿದವನು ಅನೇಕ ಶತ್ರುಗಳು ಇರುವವನು, ಮಂತ್ರಿಯು, ಪ್ರಸಿದ್ಧಿ ಹೊಂದಿದವನು. ಭಯ ಇಲ್ಲದವನು, ಅಲ್ಪಸಂತಾನ ಉಳ್ಳವನು ಆಗುವನು. ಮೀನದ ಕುಜನು ಸುಖವನ್ನು ಧನುವಿನ ಕುಜನು ಅಧಿಕಾರವನ್ನು ಕೊಡುತ್ತಾನೆ.

## ೩೮. ಬುಧನ ರಾಶಿಸ್ಥಿತ ಫಲ ·

**ಮೇಷ ಮತ್ತು ವೃಶ್ಚಿಕ :** ಬುಧನು ಕುಜಕ್ಷೇತ್ರಗಳಲ್ಲಿ ಇರುವಾಗ ಜನಿಸಿದವನು, ಜೂಜಾಡುವವನು, ಸಾಲಗಾರನು, ಮದ್ಯಪಾನ ಮಾಡುವವನು, ನಾಸ್ತಿಕನು ಕಳ್ಳತನ ಮಾಡುವವನು. ಧನಹೀನನು, ಕೆಟ್ಟ ಹೆಂಡತಿ ಉಳ್ಳವನು, ಮೋಸಗಾರನು ಮತ್ತು ಅಸತ್ಯವಂತನು ಆಗುತ್ತಾನೆ,

**ತುಲಾ ಮತ್ತು ವೃಷಭ :** ಬುಧನು ಶುಕ್ರಕ್ಷೇತ್ರದಲ್ಲಿ ಇರುವಾಗ ಜನಿಸಿದವನು, ಜ್ಞಾನ, ಧರ್ಮ ಮತ್ತು ವಿದ್ಯಾಪ್ರಸಾರ ಮಾಡುವವನು ಹೆಂಡತಿ ಮಕ್ಕಳು ಉಳ್ಳವನು, ಯಾವಾಗಲೂ ಧನಸಂಪಾದನೆಯಲ್ಲಿ ನಿರತನು, ದಾನ ಶೀಲನು, ಗುರುಹಿರಿಯರಲ್ಲಿ ಭಕ್ತಿ ಉಳ್ಳವನು ಆಗುತ್ತಾನೆ.

**ಮಿಥುನ :** ಬುಧನು ತನ್ನ ಸ್ವಕ್ಷೇತ್ರವಾದ ಮಿಥುನದಲ್ಲಿ ಇರುವಾಗ ಜನಿಸಿದವನು ಹೆಚ್ಚು ಮಾತಾಡುವವನು, ಕಲಾನಿಪುಣನು, ಸಂಗೀತಪ್ರಿಯನು, ಶಾಸ್ತ್ರಗಳನ್ನು ಬಲ್ಲವನು. ಸಿಹಿಯಾದ ಮಾತುಗಳನ್ನು ಆಡುವವನು, ಸೌಖ್ಯವಂತನು ಆಗುತ್ತಾನೆ.

**ಕರ್ಕಟಕ :** ಬುಧನು ಕರ್ಕಟಕರಾಶಿಯಲ್ಲಿ ಇರುವಾಗ ಜನಿಸಿದವನು. ಜಲಜನ್ಯವಸ್ತುಗಳಿಂದ ದ್ರವ್ಯವನ್ನು ಸಂಪಾದಿಸುವವನು. ತನ್ನ ಕುಟುಂಬದವರಿಂದ ದ್ವೇಷಿಸಲ್ಪಡುವವನು ಆಗುತ್ತಾನೆ.

**ಸಿಂಹ :** ಬುಧನು ಸಿಂಹರಾಶಿಯಲ್ಲಿ ಇರುವಾಗ ಜನಿಸಿದವನು ಸ್ತ್ರೀಯರಿಂದ ದ್ವೇಷಿಸಲ್ಪಡುವವನು, ಸುಖ ಮತ್ತು ಪುತ್ರರನ್ನು ಕಳಕೊಂಡವನು, ಸಂಚಾರಶೀಲನು, ತಿಳುವಳಿಕೆ ಇಲ್ಲದವನು, ಸ್ತ್ರೀಲೋಲನು, ತಿರಸ್ಕೃತನು ಆಗುತ್ತಾನೆ.

**ಕನ್ಯಾ :** ಬುಧನು ತನ್ನ ಉಚ್ಚರಾಶಿಯಾದ ಕನ್ಯೆಯಲ್ಲಿ ಇರುವಾಗ ಜನಿಸಿದವನು ತ್ಯಾಗವಂತನು. ಪಂಡಿತನು, ಸಕಲಗುಣ ಸಂಪನ್ನನು, ಸುಖವಂತನು, ತಾಳ್ಮೆ ಉಳ್ಳವನು, ಭಯ ಇಲ್ಲದವನು ಮತ್ತು ಯುಕ್ತಿವಂತನು ಆಗುತ್ತಾನೆ.

**ಧನು :** ಬುಧನು ಧನುರಾಶಿಯಲ್ಲಿ ಇರುವಾಗ ಜನಿಸಿದವನು ರಾಜಪೂಜಿತನು, ಪಂಡಿತನು, ಸಮಯಕ್ಕೆ ಸರಿಯಾಗಿ ಮಾತಾಡುವವನು ಆಗುತ್ತಾನೆ.

**ಮಕರ ಮತ್ತು ಕುಂಭ :** ಬುಧನು ಶನಿಕ್ಷೇತ್ರದಲ್ಲಿ ಇರುವಾಗ ಜನಿಸಿದವನು ಪರಸೇವೆಯಲ್ಲಿ ನಿರತನು, ಧನ ಇಲ್ಲದವನು, ಕೆತ್ತನೆ ಕೆಲಸಗಳಲ್ಲಿ ಪ್ರವೀಣನು, ಸಾಲವಂತನು, ಭಾರವಾದ ಕೆಲಸಗಳನ್ನು ಮಾಡುವವನು ಆಗುತ್ತಾನೆ.

**ಮೀನ :** ಬುಧನು ತನ್ನ ನೀಚರಾಶಿಯಾದ ಮೀನದಲ್ಲಿ ಇರುವಾಗ ಜನಿಸಿದವನು ಉತ್ತಮ ಭತ್ಯನು ಹೀನವೃತ್ತಿಗಳಲ್ಲಿ ಪ್ರವೀಣನು ಆಗುತ್ತಾನೆ.

## ೩೯. ಗುರುವಿನ ರಾಶಿಸ್ಥಿತ ಫಲ

**ಮೇಷ ಮತ್ತು ವೃಶ್ಚಿಕ :** ಗುರುವು ಕುಜಕ್ಷೇತ್ರಗಳಲ್ಲಿ ಇರುವಾಗ ಜನಿಸಿದವನು ಸೇನಾನಾಯಕನು, ಅಧಿಕಧನಉಳ್ಳವನು, ಹೆಚ್ಚು ಸಂತತಿ ಮತ್ತು ಪತ್ನೀ ಸುಖಉಳ್ಳವನು, ಉದಾರನು, ಉತ್ತಮ ಪರಿಚಾರಕರು ಉಳ್ಳವನು, ಕ್ಷಮಾಗುಣ ಇರುವವನು, ಕಾಂತಿಯುತನು, ಗುಣವಂತನು, ಪ್ರಖ್ಯಾತನು ಆಗುತ್ತಾನೆ.

**ವೃಷಭ ಮತ್ತು ತುಲಾ:** ಗುರುವು ಶುಕ್ರಕ್ಷೇತ್ರಗಳಲ್ಲಿ ಇರುವಾಗ ಜನಿಸಿದವನು ಆರೋಗ್ಯವಂತನು, ಸುಖವಂತನು, ಧನ, ಮಿತ್ರ, ಪುತ್ರಾದಿಉಳ್ಳವನು, ಉದಾರಗುಣಾನ್ವಿತನು, ಎಲ್ಲರಿಂದ ಮೆಚ್ಚಲ್ಪಟ್ಟವನು ಆಗುತ್ತಾನೆ.

**ಕನ್ಯಾ : ಮತ್ತು ಮಿಥುನ :** ಗುರುವು ಬುಧಕ್ಷೇತ್ರಗಳಲ್ಲಿ ಇರುವಾಗ ಜನಿಸಿದವನು ದೊಡ್ಡ ಕುಟುಂಬಉಳ್ಳವನು, ಪುತ್ರ, ಮಿತ್ರಾದಿಉಳ್ಳವನು ಸುಖವಂತನು, ಮಂತ್ರಿಯೂ ಆಗುತ್ತಾನೆ.

**ಕರ್ಕಟಕ :** ಗುರುವು ತನ್ನ ಉಚ್ಚಕ್ಷೇತ್ರವಾದ ಕರ್ಕಟಕ ರಾಶಿಯಲ್ಲಿ ಇರುವಾಗ ಜನಿಸಿದವನು ರತ್ನ, ಪುತ್ರ, ಧನ, ದಾರ, ವೈಭವ, ಐಶ್ವರ್ಯ, ಸದ್ಬುದ್ಧಿ, ಸುಖ ಇತ್ಯಾದಿ ಉಳ್ಳವನು ಆಗುತ್ತಾನೆ.

**ಸಿಂಹ :** ಗುರುವು ಸಿಂಹರಾಶಿಯಲ್ಲಿ ಇರುವಾಗ ಜನಿಸಿದವನು ದಂಡನಾಯಕನು ಆಗುತ್ತಾನೆ ಮತ್ತು ಗುರುವು ಉಚ್ಚದಲ್ಲಿ ನೀಡುವ ಸಕಲ ಫಲಗಳನ್ನು ನೀಡುತ್ತಾನೆ.

**ಕುಂಭ :** ಗುರುವು ಕುಂಭರಾಶಿಯಲ್ಲಿ ಇರುವಾಗ ಉಚ್ಚರಾಶಿಯಲ್ಲಿ ನೀಡುವ ಸಕಲ ಫಲಗಳನ್ನು ನೀಡುತ್ತಾನೆ.

**ಧನು ಮತ್ತು ಮೀನ :** ಗುರುವು ತನ್ನ ಸ್ವಕ್ಷೇತ್ರಗಳಾದ ಧನು ಮತ್ತು ಮೀನರಾಶಿಯಲ್ಲಿ ಇರುವಾಗ ಜನಿಸಿದವನು ಜಿಲ್ಲಾಧಿಕಾರಿ, ಮಂತ್ರಿ, ಸೇನಾಧಿಪತಿ ಅಥವಾ ಧನವಂತನು ಆಗುತ್ತಾನೆ.

**ಮಕರ :** ಗುರುವು ಮಕರರಾಶಿಯಲ್ಲಿ ಇರುವಾಗ ಜನಿಸಿದವನು ಹೀನ ಕೆಲಸಗಳನ್ನು ಮಾಡುವವನು, ಅಲ್ಪಸಂಪತ್ತುಉಳ್ಳವನು, ಸುಖ ಇಲ್ಲದವನು ಆಗುತ್ತಾನೆ.

# ೪೦. ಶುಕ್ರನ ರಾಶಿಸ್ಥಿತ ಫಲ

**ಮೇಷ ಮತ್ತು ವೃಶ್ಚಿಕ :** ಶುಕ್ರನು ಕುಜಕ್ಷೇತ್ರಗಳಲ್ಲಿ ಇರುವಾಗ ಜನಿಸಿದವನು ಪರಸ್ತ್ರೀಯರನ್ನು ಅಪೇಕ್ಷಿಸುವವನು ಮತ್ತು ಅದರಿಂದಾಗಿ ಧನ ವನ್ನು ಕಳೆಕೊಂಡವನು, ಕೆಟ್ಟಹೆಸರನ್ನು ಪಡೆದವನು, ತನ್ನ ವಂಶಕ್ಕೆ ಅಪಕೀರ್ತಿ ಯನ್ನು ತರುವವನು ಆಗುತ್ತಾನೆ.

**ವೃಷಭ ಮತ್ತು ತುಲಾ :** ಶುಕ್ರನು ಸ್ವಕ್ಷೇತ್ರದಲ್ಲಿ ಇರುವಾಗ ಜನಿಸಿ ದವನು ತನ್ನ ಪರಾಕ್ರಮ ಮತ್ತು ಬುದ್ಧಿವಂತಿಕೆಯಿಂದ ಧನಗಳಿಸುತ್ತಾನೆ. ಸಮಾಜದಲ್ಲಿ ಗಣ್ಯವ್ಯಕ್ತಿ ಆಗುತ್ತಾನೆ. ತನ್ನ ಕುಟುಂಬದಲ್ಲಿ ಮುಖ್ಯಸ್ಥನು ಮತ್ತು ಪ್ರಸಿದ್ಧಿ ಹೊಂದಿದವನು ಆಗುತ್ತಾನೆ.

**ಮಿಥುನ :** ಶುಕ್ರನು ಬುಧಕ್ಷೇತ್ರವಾದ ಮಿಥುನದಲ್ಲಿ ಇರುವಾಗ ಜನಿಸಿ ದವನು, ರಾಜಕಾರ್ಯನಿರತನು, ಧನವಂತನು, ಕಲಾಭಿರುಚಿ ಉಳ್ಳವನು ಆಗುತ್ತಾನೆ.

**ಕರ್ಕಟಕ :** ಶುಕ್ರನು ಕರ್ಕಟಕರಾಶಿಯಲ್ಲಿ ಇರುವಾಗ ಜನಿಸಿದವನು, ಇಬ್ಬರು ಹೆಂಡತಿಯರು ಉಳ್ಳವನು, ಯಾಚಕನು, ಭಯ ಉಳ್ಳವನು, ಕಾಮಿಯು ದುಃಖಉಳ್ಳವನು ಆಗುತ್ತಾನೆ.

**ಸಿಂಹ :** ಶುಕ್ರನು ಸಿಂಹರಾಶಿಯಲ್ಲಿ ಇರುವಾಗ ಜನಿಸಿದವನು, ಸ್ತ್ರೀಯ ರಿಂದ ಧನವನ್ನು ಗಳಿಸಿದವನು, ಉತ್ತಮ ಪತ್ನಿಉಳ್ಳವನು, ಅಲ್ಪ ಸಂತತಿ ಉಳ್ಳವನು, ಆಗುತ್ತಾನೆ.

**ಕನ್ಯಾ :** ಶುಕ್ರನು ತನ್ನ ನೀಚಕ್ಷೇತ್ರವಾದ ಕನ್ಯಾರಾಶಿಯಲ್ಲಿ ಇರುವಾಗ ಜನಿಸಿದವನು, ಅತಿಹೀನ ಕರ್ಮಗಳನ್ನು ಮಾಡುವವನು ಆಗುತ್ತಾನೆ.

**ಧನು :** ಶುಕ್ರನು ಧನುರಾಶಿಯಲ್ಲಿ ಇರುವಾಗ ಜನಿಸಿದವನು ಸದ್ಗುಣನು, ಧನವಂತನು ಆಗುತ್ತಾನೆ.

**ಮಕರ ಮತ್ತು ಕುಂಭ :** ಶುಕ್ರನು ಶನಿಕ್ಷೇತ್ರದಲ್ಲಿ ಇರುವಾಗ ಜನಿಸಿ ದವನು, ಸೌಭಾಗ್ಯವಂತನು, ಸ್ತ್ರೀವಶನು ಆದವನು, ನೀಚಸ್ತ್ರೀಯರಲ್ಲಿ ಆಸಕ್ತಿ ಉಳ್ಳವನು ಆಗುತ್ತಾನೆ.

**ಮೀನ :** ಶುಕ್ರನು ತನ್ನ ಉಚ್ಚಕ್ಷೇತ್ರವಾದ ಮೀನರಾಶಿಯಲ್ಲಿ ಇರುವಾಗ ಜನಿಸಿದವನು ವಿದ್ಯಾವಂತನು, ಧನವಂತನು, ರಾಜಪೂಜಿತನು ಮತ್ತು ಭಾಗ್ಯ

# ೪೧. ಶನಿಯು ರಾಶಿಸ್ಥಿತ ಫಲ

**ಮೇಷ:** ಶನಿಯು ತನ್ನ ನೀಚಕ್ಷೇತ್ರವಾದ ಮೇಷರಾಶಿಯಲ್ಲಿ ಇರುವಾಗ ಜನಿಸಿದವನು ಮೂರ್ಖನು, ಸಂಚಾರಶೀಲನು, ಕಪಟಉಳ್ಳವನು, ಮಿತ್ರರಹಿತನು ಆಗುತ್ತಾನೆ.

**ವೃಷಭ:** ಶನಿಯು ವೃಷಭರಾಶಿಯಲ್ಲಿ ಇರುವಾಗ ಜನಿಸಿದವನು, ಪತಿತೆಯರಲ್ಲಿ ಅನುರಾಗಉಳ್ಳವನು, ಅಲ್ಪ ಐಶ್ವರ್ಯ, ಸಂಪತ್ತು, ವೈಭವ ಇತ್ಯಾದಿ ಉಳ್ಳವನು ಮತ್ತು ಅನೇಕ ಸ್ತ್ರೀ ಉಳ್ಳವನು ಆಗುತ್ತಾನೆ.

**ಮಿಥುನ ಮತ್ತು ಕನ್ಯಾ:** ಶನಿಯು ಬುಧಕ್ಷೇತ್ರದಲ್ಲಿ ಇರುವಾಗ ಜನಿಸಿದವನು, ನಿರ್ಲಜ್ಜನು, ದುಃಖವಂತನು, ಅಪುತ್ರನು, ಲೇಖನದಲ್ಲಿ ಕುಶಲನು, ಗ್ರಾಮಪುರಾಧಿಕಾರಿ ಅಥವಾ ಜಿಲ್ಲಾಧಿಕಾರಿ ಆಗುತ್ತಾನೆ.

**ಕರ್ಕಟಕ:** ಶನಿಯು ಕರ್ಕಟಕ ರಾಶಿಯಲ್ಲಿ ಇರುವಾಗ ಜನಿಸಿದವನು, ಧನವಿಲ್ಲದವನು, ವಿಕೃತದಂತ ಉಳ್ಳವನು, ಮಾತೃಸುಖ ಇಲ್ಲದವನು, ಅಜ್ಞಾನಿಯು, ಪುತ್ರಹೀನನು ಆಗುವನು.

**ಸಿಂಹ:** ಶನಿಯು ಸಿಂಹರಾಶಿಯಲ್ಲಿ ಇರುವಾಗ ಜನಿಸಿದವನು, ಅಭಿಮಾನ ಇಲ್ಲದವನು, ಸುಖ, ಸಂತತಿ ಇಲ್ಲದವನು. ಕಾಯಕಷ್ಟಗಳನ್ನು ಮಾಡುವವನು ಆಗುತ್ತಾನೆ.

**ತುಲಾ:** ಶನಿಯು ತನ್ನ ಉಚ್ಚಕ್ಷೇತ್ರವಾದ ತುಲೆಯಲ್ಲಿ ಇರುವಾಗ ಜನಿಸಿದವನು ಪ್ರಸಿದ್ಧಿ ಪಡೆದವನು, ಊರಿನಲ್ಲಿ ಸಂಘ ಸಂಸ್ಥೆಗಳಲ್ಲಿ ಮಾನಿಸಲ್ಪಡುವವನು, ಧನವಂತನು ಆಗುತ್ತಾನೆ.

**ವೃಶ್ಚಿಕ:** ಶನಿಯು ಕುಜಕ್ಷೇತ್ರವಾದ ವೃಶ್ಚಿಕರಾಶಿಯಲ್ಲಿ ಇದ್ದಾಗ ಜನಿಸಿದವನು ಚಂಚಲಚಿತ್ತನು, ನಿರ್ದಯಿಯು, ಬಂಧನ, ಶಿಕ್ಷೆ, ಹೊಡೆತ ಇತ್ಯಾದಿಗಳನ್ನು ಅನುಭವಿಸುವವನು ಆಗುತ್ತಾನೆ.

**ಧನು ಮತ್ತು ಮೀನ:** ಶನಿಯು ಗುರುಕ್ಷೇತ್ರಗಳಲ್ಲಿ ಇರುವಾಗ ಜನಿಸಿದವನು, ಉತ್ತಮ ಅಂತಃಕರಣ ಉಳ್ಳವನು, ವಾರ್ಧಿಕ್ಯದಲ್ಲಿ ಸುಖ ಉಳ್ಳವನು, ಉತ್ತಮ ಸ್ತ್ರೀ ಪುತ್ರರು ಉಳ್ಳವನು, ವಿಶ್ವಾಸಾರ್ಹನು, ಧನವಂತನು, ಗ್ರಾಮಪುರಾಧಿನಾಯಕನು ಆಗುತ್ತಾನೆ.

**ಮಕರ: ಮತ್ತು ಕುಂಭ:** ಶನಿಯು ತನ್ನ ಸ್ವಕ್ಷೇತ್ರಗಳಾದ ಮಕರ ಮತ್ತು ಕುಂಭರಾಶಿಗಳಲ್ಲಿ ಇರುವಾಗ ಜನಿಸಿದವನು, ಪರಸ್ತ್ರೀ ಪರಧನಗಳಿಂದ ಕೂಡಿದವನು, ನಗರಸಭಾಪತಿ, ಅಥವಾ ಸೇನಾಧಿಕಾರಿ, ದೃಷ್ಟಿದೋಷ ಉಳ್ಳವನು, ಶುಚಿತ್ವ ಇಲ್ಲದವನು, ಹೆಚ್ಚುಕಾಲ ಧನ ಉಳ್ಳವನು, ವೈಭವವಂತನು, ಸುಖ-ಸಂತೋಷಗಳಿಂದ ಕೂಡಿದವನು ಆಗುತ್ತಾನೆ.

## ೪೨. ರಾಶಿಸ್ಥಿತ ಗ್ರಹರ ಫಲ

**ಸ್ವಕ್ಷೇತ್ರಗತ ಗ್ರಹಫಲ:** 1. ಒಬ್ಬ ಗ್ರಹನು ಸ್ವಕ್ಷೇತ್ರದಲ್ಲಿ ಇದ್ದರೆ ತನ್ನ ಕುಲಕ್ಕೆ ಸಮನಾದವನು ಆಗುತ್ತಾನೆ. 2. ಎರಡು ಗ್ರಹರು ಸ್ವಕ್ಷೇತ್ರದಲ್ಲಿ ಇದ್ದರೆ ಕುಟುಂಬದಲ್ಲಿ ಪ್ರಮುಖನು ಆಗುತ್ತಾನೆ. 3. ಮೂರು ಗ್ರಹರು ಸ್ವಕ್ಷೇತ್ರದಲ್ಲಿ ಇದ್ದರೆ, ಬಂಧುಗಳಿಂದ ಪೂಜಿಸಲ್ಪಡುತ್ತಾನೆ. 4. ನಾಲ್ಕು ಗ್ರಹರು ಸ್ವಕ್ಷೇತ್ರದಲ್ಲಿ ಇದ್ದರೆ ಧನವಂತನು ಆಗುತ್ತಾನೆ. 5. ಐದು ಗ್ರಹರು ಸ್ವಕ್ಷೇತ್ರದಲ್ಲಿ ಇದ್ದರೆ ಸುಖವಂತನು ಆಗುತ್ತಾನೆ. 6. ಆರು ಗ್ರಹರು ಸ್ವಕ್ಷೇತ್ರದಲ್ಲಿ ಇದ್ದರೆ ಭೋಗವಂತನು ಆಗುತ್ತಾನೆ. 7. ಏಳು ಗ್ರಹರು ಸ್ವಕ್ಷೇತ್ರದಲ್ಲಿ ಇದ್ದರೆ ರಾಜನು ಆಗುತ್ತಾನೆ.

**ಮಿತ್ರರಾಶಿಗತ ಗ್ರಹಫಲ:** 1. ಒಬ್ಬ ಗ್ರಹನು ಮಿತ್ರರಾಶಿಯಲ್ಲಿದ್ದು ಅನ್ಯರು ಶತ್ರು ಅಥವಾ ಸಮರಾಶಿಯಲ್ಲಿ ಇದ್ದರೆ ಪರರಿಂದ ಪೋಷಿಸಲ್ಪಡುವನು. 2. ಎರಡು ಗ್ರಹರು ಮಿತ್ರರಾಶಿಯಲ್ಲಿ ಇದ್ದರೆ ಮಿತ್ರರಿಂದ ಪೋಷಿಸಲ್ಪಡುವನು. 3. ಮೂರು ಗ್ರಹರು ಮಿತ್ರರಾಶಿಯಲ್ಲಿ ಇದ್ದರೆ ಸ್ವಜನರಿಂದ ಪೋಷಿಸಲ್ಪಡುವನು. 4. ನಾಲ್ಕು ಗ್ರಹರು ಮಿತ್ರರಾಶಿಯಲ್ಲಿ ಇದ್ದರೆ ಬಂಧುಗಳಿಂದ ಪೋಷಿಸಲ್ಪಡುವನು. 5. ಐದು ಗ್ರಹರು ಮಿತ್ರರಾಶಿಯಲ್ಲಿ ಇದ್ದರೆ ನಾಯಕನು ಆಗುತ್ತಾನೆ. 6. ಆರು ಗ್ರಹರು ಮಿತ್ರರಾಶಿಯಲ್ಲಿ ಇದ್ದರೆ ಸೇನಾಧಿಪತಿ ಆಗುತ್ತಾನೆ. 7. ಏಳು ಗ್ರಹರು ಮಿತ್ರರಾಶಿಯಲ್ಲಿ ಇದ್ದರೆ ರಾಜನು ಆಗುತ್ತಾನೆ.

ಒಬ್ಬ ಗ್ರಹನು ಉಚ್ಚಕ್ಷೇತ್ರದಲ್ಲಿದ್ದು ಮಿತ್ರಗ್ರಹರಿಂದ ನೋಡಲ್ಪಟ್ಟರೆ ರಾಜನು ಆಗುತ್ತಾನೆ. ಒಬ್ಬ ಗ್ರಹನು ಉಚ್ಚಕ್ಷೇತ್ರದಲ್ಲಿದ್ದು ಮಿತ್ರಗ್ರಹರಿಂದ ಯುತನಾದರೆ ವಿಪುಲವಾದ ಧನವನ್ನು ಗಳಿಸುತ್ತಾನೆ.

**ಶತ್ರು ನೀಚರಾಶಿಗತ ಗ್ರಹಫಲ:** 1. ಒಬ್ಬ ಗ್ರಹನು ಶತ್ರು ಅಥವಾ ನೀಚ ಕ್ಷೇತ್ರದಲ್ಲಿದ್ದರೆ ಧನವನ್ನು ಕಳಕೊಳ್ಳುತ್ತಾನೆ. 2. ಎರಡು ಗ್ರಹರು ಶತ್ರು

ಅಥವಾ ನೀಚ ಕ್ಷೇತ್ರದಲ್ಲಿ ಇದ್ದರೆ ಸುಖವನ್ನು ಕಳಕೊಳ್ಳುತ್ತಾನೆ. 3. ಮೂರು ಗ್ರಹರು ಶತ್ರು ಅಥವಾ ನೀಚ ಕ್ಷೇತ್ರದಲ್ಲಿ ಇದ್ದರೆ ಮೂಢನು ಆಗುತ್ತಾನೆ. 4. ನಾಲ್ಕು ಗ್ರಹರು ಶತ್ರು ಅಥವಾ ನೀಚ ಕ್ಷೇತ್ರದಲ್ಲಿ ಇದ್ದರೆ ರೋಗಪೀಡಿತನು ಆಗುತ್ತಾನೆ. 5. ಐದು ಗ್ರಹರು ಶತ್ರು ಅಥವಾ ನೀಚ ಕ್ಷೇತ್ರದಲ್ಲಿ ಇದ್ದರೆ ಬಂಧಿತನು ಆಗುತ್ತಾನೆ. 6. ಆರು ಗ್ರಹರು ಶತ್ರು ಅಥವಾ ನೀಚ ಕ್ಷೇತ್ರದಲ್ಲಿ ಇದ್ದರೆ ಕೊಲೆಗಾರನು ಆಗುತ್ತಾನೆ. 7. ಏಳು ಗ್ರಹರು ನೀಚ ಅಥವಾ ಶತ್ರು ಕ್ಷೇತ್ರದಲ್ಲಿ ಇದ್ದರೆ ಅನೇಕ ಸಂಕಷ್ಟಗಳನ್ನು ಅನುಭವಿಸುತ್ತಾನೆ.

ಹೋರಾಫಲ : ಪಾಪಗ್ರಹರು ಅಂದರೆ ರವಿ. ಕುಜ, ಮತ್ತು ಶನಿಯು ವಿಷಮರಾಶಿಯಲ್ಲಿದ್ದು ಸೂರ್ಯ ಹೋರೆಯಲ್ಲಿ ಇದ್ದರೆ ಪ್ರಖ್ಯಾತನು, ಸಾಹಸ ಕಾರ್ಯಗಳನ್ನು ಮಾಡುವವನು, ಬಲಿಷ್ಠನು ಧನವಂತನು, ಮತ್ತು ತೇಜಸ್ವಿಯು ಆಗುತ್ತಾನೆ.

ಶುಭಗ್ರಹರು ಅಂದರೆ ಚಂದ್ರ. ಬುಧ. ಗುರು, ಮತ್ತು ಶುಕ್ರನು ಸಮರಾಶಿಯಲ್ಲಿದ್ದು, ಚಂದ್ರಹೋರೆಯಲ್ಲಿ ಇದ್ದರೆ ಮೃದುತ್ವ, ಕಾಂತಿ, ಸೌಖ್ಯ, ಸೌಭಾಗ್ಯ, ಬುದ್ಧಿ, ಮತ್ತು ಮಧುರ ವಾಕ್ಯ ಉಳ್ಳವನು ಆಗುತ್ತಾನೆ.

ಪಾಪಗ್ರಹರು ಸಮರಾಶಿಯಲ್ಲಿದ್ದು ಸೂರ್ಯ ಹೋರೆಯಲ್ಲಿ ಇದ್ದರೆ, ಅಥವಾ ವಿಷಮರಾಶಿಗಳಲ್ಲಿ ಇದ್ದು ಚಂದ್ರ ಹೋರೆಯಲ್ಲಿ ಇದ್ದರೆ ಮೇಲಿನ ಗುಣಗಳು ಮಧ್ಯಮವಾಗಿ ಇರುತ್ತವೆ. ಶುಭಗ್ರಹರು ವಿಷಮರಾಶಿಯಲ್ಲಿದ್ದು ಚಂದ್ರಹೋರೆಯಲ್ಲಿ ಇದ್ದರೆ ಅಥವಾ ಸಮರಾಶಿಯಲ್ಲಿ ಇದ್ದು ಸೂರ್ಯ ಹೋರೆಯಲ್ಲಿ ಇದ್ದರೆ ಮೇಲಿನ ಗುಣಗಳು ಮಧ್ಯಮವಾಗಿ ಇರುತ್ತದೆ.

ಪಾಪಗ್ರಹರು ಸಮರಾಶಿಯಲ್ಲಿದ್ದು, ಚಂದ್ರಹೋರೆಯಲ್ಲಿ ಇದ್ದರೆ ಮೇಲಿನ ಗುಣಗಳು ಇರುವುದಿಲ್ಲ. ಹಾಗೆಯೇ ಶುಭಗ್ರಹರು ವಿಷಮರಾಶಿಯಲ್ಲಿದ್ದು ಸೂರ್ಯ ಹೋರೆಯಲ್ಲಿ ಇದ್ದರೆ ಮೇಲಿನ ಗುಣಗಳು ಇರುವುದಿಲ್ಲ.

ದ್ರೇಕ್ಕಾಣಗತ ಚಂದ್ರಫಲ: ಚಂದ್ರನು ಸ್ವದ್ರೇಕ್ಕಾಣದಲ್ಲಿ ಅಥವಾ ಮಿತ್ರದ್ರೇಕ್ಕಾಣದಲ್ಲಿ ಇದ್ದರೆ ಉತ್ತಮ ಗುಣಉಳ್ಳವನು, ರೂಪವಂತನು, ಆನಂದ ಸ್ವರೂಪನು ಆಗುತ್ತಾನೆ. ಅನ್ಯದ್ರೇಕ್ಕಾಣದಲ್ಲಿ ಇದ್ದರೆ ಅಂದರೆ ಸಮ, ಶತ್ರುದ್ರೇಕ್ಕಾಣದಲ್ಲಿ ಇದ್ದರೆ ಆದ್ರೇಕ್ಕಾಣಾಧಿಪತಿಯ ಗುಣವನ್ನು ಕೊಡುತ್ತಾನೆ.

## ೪೩. ಲಗ್ನನವಾಂಶ ಫಲ

1. ಮೇಷನವಾಂಶದಲ್ಲಿ ಲಗ್ನವು ಇದ್ದರೆ ಚೋರನು ಅಥವಾ ಸುಳ್ಳಾಡುವವನು, ಆಗುತ್ತಾನೆ. 2. ವೃಷಭನವಾಂಶದಲ್ಲಿ ಲಗ್ನವಿದ್ದರೆ ಭೋಗವಂತನು ಆಗುತ್ತಾನೆ. 3. ಮಿಥುನ ನವಾಂಶದಲ್ಲಿ ಲಗ್ನವಿದ್ದರೆ ಪಂಡಿತನು ಆಗುತ್ತಾನೆ. 4. ಕರ್ಕಟಕ ನವಾಂಶದಲ್ಲಿ ಲಗ್ನವಿದ್ದರೆ ಧನಿಕನು ಆಗುತ್ತಾನೆ. 5. ಸಿಂಹ ನವಾಂಶದಲ್ಲಿ ಲಗ್ನವಿದ್ದರೆ ನರೇಂದ್ರನು ಆಗುತ್ತಾನೆ. 6. ಕನ್ಯಾನವಾಂಶದಲ್ಲಿ ಲಗ್ನವಿದ್ದರೆ ನಪುಂಸಕನು ಆಗುತ್ತಾನೆ. 7. ತುಲಾನವಾಂಶದಲ್ಲಿ ಲಗ್ನವಿದ್ದರೆ ಶೂರನು ಆಗುತ್ತಾನೆ. 8. ವೃಶ್ಚಿಕ ನವಾಂಶದಲ್ಲಿ ಲಗ್ನವಿದ್ದರೆ ಭಾರವಾದ ಕೆಲಸಗಳನ್ನು ಮಾಡುವವನು ಆಗುತ್ತಾನೆ. 9. ಧನುನವಾಂಶದಲ್ಲಿ ಲಗ್ನವಿದ್ದರೆ ಸೇವಕ ವೃತ್ತಿಯಿಂದ ಜೀವಿಸುವವನು ಆಗುತ್ತಾನೆ. 10. ಮಕರನವಾಂಶದಲ್ಲಿ ಲಗ್ನವಿದ್ದರೆ ಪಾಪಕಾರ್ಯನಿರತನು ಆಗುತ್ತಾನೆ. 11. ಕುಂಭನವಾಂಶದಲ್ಲಿ ಲಗ್ನವಿದ್ದರೆ ಹಿಂಸ್ರನು ಆಗುತ್ತಾನೆ. 12. ಮೀನನವಾಂಶದಲ್ಲಿ ಲಗ್ನವಿದ್ದರೆ ಭಯ ಇಲ್ಲದವನು ಆಗುತ್ತಾನೆ.

## ೪೪. ತ್ರಿಂಶಾಂಶ ಫಲ

ಕುಜನು ಸ್ವತ್ರಿಂಶಾಂಶದಲ್ಲಿ ಇದ್ದರೆ ಉತ್ತಮ ಪತ್ನಿ ಮತ್ತು ಆಭರಣ ಉಳ್ಳವನು, ಬಲಾಧಿಕ್ಯ ಉಳ್ಳವನು, ಉದಾರತೆ, ಕಾಂತಿ, ಸ್ವಪ್ರತಿಭೆಗಳಿದ್ದು ಸಾಹಸಕಾರ್ಯಗಳನ್ನು ಮಾಡುವವನು ಆಗುತ್ತಾನೆ.

ಶನಿಯು ಸ್ವತ್ರಿಂಶಾಂಶದಲ್ಲಿ ಇದ್ದರೆ ರೋಗಪೀಡಿತನು, ಪತ್ನಿಯನ್ನು ಕಳಕೊಂಡವನು, ಪರಸ್ತ್ರೀಯರಲ್ಲಿ ಆಸಕ್ತನು ದುಃಖಿತನು, ಮಲಿನನು, ಪರಾಜಿತನು ಆಗುತ್ತಾನೆ.

ಗುರುವು ಸ್ವತ್ರಿಂಶಾಂಶದಲ್ಲಿ ಇದ್ದರೆ ಧನ, ಯಶ, ಕೀರ್ತಿ, ಸುಖ, ಬುದ್ಧಿವಂತಿಕೆ, ತೇಜಸ್ಸು, ಮಾನಿಸಲ್ಪಡುವವನು, ಆರೋಗ್ಯವಂತನು, ಮಹತ್ಕಾರ್ಯಗಳನ್ನು ಸಾಧಿಸುವವನು, ಮತ್ತು ಭೋಗವಂತನು ಆಗುತ್ತಾನೆ.

ಬುಧನು ಸ್ವತ್ರಿಂಶಾಂಶದಲ್ಲಿ ಇದ್ದರೆ ಮೇಧಾವಿಯು, ಕಲಾನಿಪುಣನು, ಕಪಟಿಯು, ಕವಿತಾಶಕ್ತಿ ಉಳ್ಳವನು, ಶಾಸ್ತ್ರಗಳನ್ನು ಬಲ್ಲವನು. ಸಾಹಸಕಾರ್ಯ

ಗಳನ್ನು ಮಾಡುವವನು, ಶಿಲ್ಪ ಅಥವಾ ಕೆತ್ತನೆಯ ಕೆಲಸಗಳನ್ನು ಬಲ್ಲವನು, ತಾರ್ಕಿಕನು, ಕಷ್ಟಕಾರ್ಯಗಳನ್ನು ಮಾಡುವವನು, ಮತ್ತು ಮಾನ ಸನ್ಮಾನ ಗಳನ್ನು ಪಡೆಯುವವನು ಆಗುತ್ತಾನೆ.

ಶುಕ್ರನು ಸ್ವತ್ರಿಂಶಾಂಶದಲ್ಲಿ ಇದ್ದರೆ ಹೆಚ್ಚು ಸಂತತಿ ಉಳ್ಳವನು, ಸುಖವಂತನು, ಆರೋಗ್ಯವಂತನು, ಭಾಗ್ಯಉಳ್ಳವನು. ಧನಉಳ್ಳವನು, ರೂಪ ವಂತನು, ತೀಕ್ಷ್ಣನು. ಸುಂದರವಾದ ಶರೀರ ಉಳ್ಳವನು, ವಿಷಯಾಸಕ್ತನು ಆಗುತ್ತಾನೆ.

ಸೂರ್ಯ ಸೂರ್ಯನು ಕುಜ ತ್ರಿಂಶಾಂಶದಲ್ಲಿ ಇದ್ದರೆ. ಶೂರನು, ಸಾಹಸಕಾರ್ಯಗಳನ್ನು ಮಾಡುವವನು. ಯೋಧನು, ಅಧಿಕಾರ ಉಳ್ಳವನು, ಆಗುತ್ತಾನೆ. ಶನಿತ್ರಿಂಶಾಂಶದಲ್ಲಿ ಇದ್ದರೆ ವಿಷಮ ಸ್ವಭಾವದವನು, ಕ್ರೂರ ಕಾರ್ಯಗಳನ್ನು, ಮಾಡುವವನು. ಆಗುತ್ತಾನೆ. ಗುರುತ್ರಿಂಶಾಂಶದಲ್ಲಿ ಇದ್ದರೆ ಸದ್ಗುಣವಂತನು, ಬುಧತ್ರಿಂಶಾಂಶದಲ್ಲಿ ಇದ್ದರೆ ಸುಖವಂತನು ಶುಕ್ರನ ತ್ರಿಂಶಾಂಶ ದಲ್ಲಿ ಇದ್ದರೆ ಸುಂದರವಾದ ಕಾಂತಿಯುತ ಶರೀರಉಳ್ಳವನು ಆಗುತ್ತಾನೆ. ರವಿಸ್ಥಿತ ತ್ರಿಂಶಾಂಶಾಧಿಪತಿಯ ಗುಣಗಳು ಜಾತಕನಲ್ಲಿ ಇರುತ್ತವೆ.

ಚಂದ್ರ : ಚಂದ್ರನು ಕುಜನ ತ್ರಿಂಶಾಂಶದಲ್ಲಿ ಇದ್ದರೆ ದಯೆ ಇಲ್ಲದವನು, ಅವಿಚಾರಿ ಮತ್ತು ಅಚಲನು ಆಗುತ್ತಾನೆ. ಶನಿತ್ರಿಂಶಾಂಶದಲ್ಲಿ ಇದ್ದರೆ ಪರಪೀಡಕನು. ಹಿಂಸ್ರನು, ಕೊಲೆಗಾರನು ಆಗುತ್ತಾನೆ. ಗುರು ತ್ರಿಂಶಾಂಶದಲ್ಲಿ ಇದ್ದರೆ ಧನವಂತನು. ಮಾನವಂತನು ಆಗುತ್ತಾನೆ. ಬುಧತ್ರಿಂಶಾಂಶದಲ್ಲಿ ಇದ್ದರೆ ಪಂಡಿತನು, ಬುದ್ಧಿವಂತನು, ಆಗುತ್ತಾನೆ. ಶುಕ್ರನ ತ್ರಿಂಶಾಂಶದಲ್ಲಿ ಇದ್ದರೆ ಪ್ರಖ್ಯಾತನು ಆಗುತ್ತಾನೆ.

## ೪೫. ಉಪಗ್ರಹರು

ಜ್ಯೋತಿಷ ಶಾಸ್ತ್ರದಲ್ಲಿ ರವಿಯಿಂದ ಶನಿಯ ವರೆಗಿನ ಸಪ್ತಗ್ರಹರು ಮತ್ತು ರಾಹು. ಕೇತುಗಳನ್ನು ಆಧರಿಸಿ ಫಲಾಫಲಗಳನ್ನು ನಿರ್ಣಯಿಸುತ್ತಾರೆ. ಪ್ರತಿ ಒಬ್ಬ ಗ್ರಹನಿಗೆ ಒಂದು ಉಪಗ್ರಹವಿದೆ. ಈ ಉಪಗ್ರಹರಲ್ಲಿ ಶನಿಯ

ಪುತ್ರ ಹಾಗೂ ಉಪಗ್ರಹನಾದ ಗುಳಿಕ ಅಥವಾ ಮಾಂದಿಯ ಪ್ರಭಾವವು ಜನ್ಮ ಜಾತಕದಲ್ಲಿ ಅಧಿಕವಾಗಿ ಕಂಡುಬರುತ್ತದೆ. ನವಗ್ರಹರು ಉಪಗ್ರಹರನ್ನು ಅಪ್ರಕಾಶಕ ಗ್ರಹರೆಂದು ಕೂಡಾ ಕರೆಯುತ್ತಾರೆ.

| | ಗ್ರಹ | ಉಪಗ್ರಹ |
|---|---|---|
| 1. | ರವಿ | ಕಾಲ |
| 2. | ಚಂದ್ರ | ಪರಿಧಿ (ಪರಿವೇಷ) |
| 3. | ಕುಜ | ಧೂಮ |
| 4. | ಬುಧ | ಅರ್ಧ ಪ್ರಹಾರ |
| 5. | ಗುರು | ಯಮಕಂಟಕ |
| 6. | ಶುಕ್ರ | ಇಂದ್ರಚಾಪ (ಕೋದಂಡ) |
| 7. | ಶನಿ | ಗುಳಿಕ (ಮಾಂದಿ) |
| 8. | ರಾಹು | ಪಾಪ (ವ್ಯತಿಪಾತ) |
| 9. | ಕೇತು | ಉಪಕೇತು |

ಉಪಗ್ರಹರಲ್ಲಿ ಮಾಂದಿ ಅಥವಾ ಗುಳಿಕನು, ಅಧಿಕ ದೋಷಕಾರಕನು ಆಗಿರುತ್ತಾನೆ ಹಾಗೂ ಗುಳಿಕನ ಪ್ರಭಾವವು ಅಧಿಕವಾಗಿ ಅನುಭವದಲ್ಲಿ ಕಂಡು ಬರುತ್ತದೆ. ಯಮಕಂಟಕನು ಶುಭಫಲಗಳನ್ನು ನೀಡುತ್ತಾನೆ. ಇತರ ಉಪ ಗ್ರಹರು ನಿರ್ಬಲವಾದ ದೋಷಗಳನ್ನು ಉಂಟುಮಾಡುತ್ತಾರೆ.

ರವಿಯ ಉಪಗ್ರಹನಾದ ಕಾಲನು ರಾಹುವಿನಂತೆ ಫಲಗಳನ್ನು ನೀಡು ತ್ತಾನೆ. ಗುಳಿಕನು ಮರಣಕಾಲಸೂಚಕನು ಆಗಿದ್ದಾನೆ. ಯಮಕಂಟಕನು ರಕ್ಷಕನು, ಪೋಷಕನು ಆಗಿರುತ್ತಾನೆ. ಅರ್ಧಪ್ರಹಾರನು, ಅಷ್ಟಕವರ್ಗದಲ್ಲಿ ಹೆಚ್ಚು ಬಿಂದುಗಳುಳ್ಳ ರಾಶಿಯಲ್ಲಿದ್ದರೆ ಶುಭಫಲಗಳನ್ನು ಅನ್ಯಥಾ ಅಶುಭಫಲ ಗಳನ್ನು ನೀಡುತ್ತಾನೆ.

## ೪೬. ಗುಳಿಕ ಅಥವಾ ಮಾಂದಿ

ಗುಳಿಕ ಸ್ವರೂಪ: ಶನಿಯ ಪುತ್ರನಾದ ಗುಳಿಕನು (ಮಾಂದಿ) ಕ್ರೂರ ಸ್ವಭಾವದವನು, ತಮೋಗುಣ ಉಳ್ಳವನು. ದುಷ್ಟನು, ಪಾಪಿಯೂ, ಅತ್ಯಂತ ಉಗ್ರನು, ಸಕಲ ವಸ್ತುಗಳನ್ನು ನಾಶಮಾಡುವವನು, ಮೃತ್ಯುವನ್ನು ನೀಡು

ವವನು, ಸರ್ಪದಂತೆ ಆಕೃತಿ ಉಳ್ಳವನು, ನೀಲವಾದ ಕಣ್ಣುಗಳು ಉಳ್ಳವನು, ರಕ್ತದಂತೆ ಕೆಂಪಾದ ದೃಷ್ಟಿ ಇರುವವನು, ವಿಷಮನು, ಭೀಷಣನು, ದೀರ್ಘವಾದ ಶರೀರ ಉಳ್ಳವನು, ಐದು ಮುಖಗಳಿಂದ ಕೂಡಿದವನು, ಅಗಲವಾದ ಹಲ್ಲು ಗಳು ಉಳ್ಳವನು, ಸದಾಕಾಲವೂ ಭಯಂಕರವಾಗಿ ಕಾಣುವವನು ಆಗಿರುತ್ತಾನೆ.

ಮಾಂದಿ ಉದಯ ಕಾಲ

| | ದಿವಾಜನನ | ರಾತ್ರಿ ಜನನ |
|---|---|---|
| ರವಿವಾರ | 26 ಘಟಿ | 10 ಘಟಿ |
| ಸೋಮವಾರ | 22 ,, | 6 ,, |
| ಕುಜವಾರ | 18 ,, | 2 ,, |
| ಬುಧವಾರ | 14 ,, | 26 ,, |
| ಗುರುವಾರ | 10 ,, | 22 ,, |
| ಶುಕ್ರವಾರ | 6 ,, | 18 ,, |
| ಶನಿವಾರ | 2 ,, | 14 ,, |

ಮೇಲೆ ಹೇಳಿದ ಮಾಂದಿ ಉದಯಕಾಲವು ದಿನಮಾನ ಅಥವಾ ರಾತ್ರಿ ಮಾನ 30 ಘಟಿ ಇದ್ದಾಗ ಮಾತ್ರ ದಿನಮಾನ ಯಾ ರಾತ್ರಿಮಾನದಲ್ಲಿ ವ್ಯತ್ಯಾಸ ಇದ್ದರೆ ಮಾಂದಿಕಾಲ ಘಟಿಗಳಲ್ಲಿಯೂ ಅದೇ ಪ್ರಮಾಣದಲ್ಲಿ ವ್ಯತ್ಯಾಸ ಉಂಟಾಗುತ್ತದೆ. ದಿನಮಾನವೆಂದರೆ ಸೂರ್ಯೋದಯದಿಂದ ಸೂರ್ಯಾಸ್ತ ವರೆಗಿನ ಕಾಲ. ರಾತ್ರಿಮಾನವೆಂದರೆ ಸೂರ್ಯಾಸ್ತದಿಂದ ಸೂರ್ಯೋದಯದ ವರೆಗಿನ ಕಾಲ ಆಗಿರುತ್ತದೆ.

ಉಪಗ್ರಹರಲ್ಲಿ ಶನಿಯ ಉಪಗ್ರಹನಾದ ಮಾಂದಿ ಅಥವಾ ಗುಳಿಕನ ವರ್ಚಸ್ಸು ಜನ್ಮ ಜಾತಕದಲ್ಲಿ ಅಧಿಕವಾಗಿ ಕಂಡುಬರುತ್ತದೆ. ಜನ್ಮ ಜಾತಕದಲ್ಲಿ ಶನಿಯು ಮರಣವನ್ನು ಸೂಚಿಸುವುದಾದರೆ ಶನಿಯ ಪುತ್ರನಾದ ಮಾಂದಿಯು

ಮರಣಕಾಲವನ್ನು ಸೂಚಿಸುತ್ತಾನೆ. ಮಾಂದಿಯು ಶುಭಫಲ ಪ್ರಾಪ್ತಿ ಕಾಲದಲ್ಲಿ ವಿಘ್ನಗಳನ್ನು ಉಂಟುಮಾಡುವುದು ಕಂಡುಬರುತ್ತದೆ. ಗುಳಿಕನು ತಮೋಗುಣ ಉಳ್ಳವನು. ದುಷ್ಟ ಸ್ವಭಾವದವನು. ಅತ್ಯಂತ ಉಗ್ರನು. ಕ್ರೂರಕಾರ್ಯಗಳಲ್ಲಿ ನಿರತನು. ಸಕಲ ವಸ್ತುಗಳ ನಾಶಕ್ಕೆ ಕಾರಣೀಭೂತನು. ಅಕಾಲಮರಣ. ಅಥವಾ ಅಪಮೃತ್ಯುವನ್ನು ನೀಡುವವನು. ಅದೃಶ್ಯ ಶಕ್ತಿಗಳ ಪ್ರಭಾವ. ಪ್ರೇತಬಾಧೆ. ಇತ್ಯಾದಿಗಳನ್ನು ಸೂಚಿಸುವವನು ಆಗಿರುತ್ತಾನೆ.

ಲಗ್ನದಲ್ಲಿ ಮಾಂದಿ ಇದ್ದಾಗ ಜನಿಸಿದವನು ಅನಾರೋಗ್ಯದಿಂದ ಬಳಲುವವನು, ಮಂದಬುದ್ಧಿ ಉಳ್ಳವನು. ಕೋಪಿಷ್ಟನು, ಐಶ್ವರ್ಯವಂತನು, ಗ್ರಾಮಾಧಿಕಾರಿಯು ಆಗುತ್ತಾನೆ. ಪಾಪಗ್ರಹಯುತ ಮಾಂದಿಯು ಲಗ್ನದಲ್ಲಿ ಇದ್ದರೆ ಜಾತಕನು, ವಂಚಕನು, ಕ್ರೋಧಿಯು, ಹೀನಕೆಲಸಗಳನ್ನು ಮಾಡುವವನು, ಚೋರನು, ಕ್ರೂರಕೆಲಸಗಳನ್ನು ಮಾಡುವವನು. ವಿನಯರಹಿತನು. ವಿಕಾರವಾದ ಕಣ್ಣುಗಳು ಉಳ್ಳವನು. ಸುಖವಿಲ್ಲದವನು, ಲಂಪಟನು, ಜಡಮತಿಯು ವೇದ ಮತ್ತು ಶಾಸ್ತ್ರಜ್ಞಾನ ಇಲ್ಲದವನು ಆಗುತ್ತಾನೆ. ಶುಭಗ್ರಹಯುತ ಮಾಂದಿಯು ಲಗ್ನದಲ್ಲಿದ್ದರೆ ಜಾತಕನು ಅಧಿಕಾರ. ಸಂಪತ್ತು, ಬುದ್ಧಿವಂತಿಕೆ, ಕೈಕೊಂಡಕಾರ್ಯಗಳಲ್ಲಿ ಯಶಸ್ಸು ಇತ್ಯಾದಿ ಶುಭಫಲ ಗಳನ್ನು ಅನುಭವಿಸುತ್ತಾನೆ.

ಧನಸ್ಥಾನದಲ್ಲಿ ಮಾಂದಿ ಇದ್ದಾಗ ಜನಿಸಿದವನು ವಿಷಯಾಸಕ್ತನು, ಸಂಚಾರಶೀಲನು, ಕ್ರೋಧ ಉಳ್ಳವನು. ಕೆಟ್ಟಮಾತುಗಳನ್ನು ಆಡುವವನು, ವ್ಯಸನವಂತನು ಆಗುತ್ತಾನೆ. ಪಾಪಗ್ರಹಯುತ ಮಾಂದಿಯು ದ್ವಿತೀಯದಲ್ಲಿ ಇದ್ದರೆ ಧನಸಂಪತ್ತಿನ ಅವನತಿ, ವಾಕ್‌ದೋಷ, ಅಥವಾ ಮಾತಾಡುವಾಗ ತಡೆ, ಕುಟುಂಬಕಲಹ, ವಿದ್ಯಾಭ್ಯಾಸದಲ್ಲಿ ವಿಘ್ನಗಳು, ವಿದೇಶವಾಸ ಸಂಭವಿಸುತ್ತದೆ. ಶುಭಗ್ರಹಯುತಮಾಂದಿ ದ್ವಿತೀಯದಲ್ಲಿ ಇದ್ದರೆ ವಾಕ್‌ಪ್ರತಿಭೆ. ಧನಸಂಪತ್ತಿನ ಅಭಿವೃದ್ಧಿ ಉಂಟಾಗುತ್ತದೆ.

ತೃತೀಯದಲ್ಲಿ ಮಾಂದಿ ಇದ್ದಾಗ ಜನಿಸಿದವನು ಗರ್ವಿಷ್ಠನು, ಅಹಂಕಾರ ಉಳ್ಳವನು. ವಿರಹತೆ, ತೀಕ್ಷ್ಣವಾದ ಕೋಪ, ಧನಾರ್ಜನೆ, ಶೋಕ, ಭಯ ಇಲ್ಲದವನು, ತಮ್ಮಂದಿರು ಮತ್ತು ತಂಗಿಯರು ಇಲ್ಲದವನು ಆಗುತ್ತಾನೆ.

ಚತುರ್ಥದಲ್ಲಿ ಮಾಂದಿ ಇದ್ದಾಗ ಜನಿಸಿದವನು ವಿದ್ಯೆ ಮತ್ತು ಧನ ಇಲ್ಲದವನು, ಗೃಹ ಮತ್ತು ವಾಹನ ಸುಖ ಇಲ್ಲದವನು ಅಟನನು. ಕುಟುಂಬ ಸುಖ ಇಲ್ಲದವನು ಅಥವಾ ಬಂಧುಗಳಲ್ಲಿ ಕಲಹ ಉಳ್ಳವನು ಆಗುತ್ತಾನೆ.

ಪಂಚಮದಲ್ಲಿ ಮಾಂದಿ ಇದ್ದಾಗ ಜನಿಸಿದವನು ಚಂಚಲಚಿತ್ತದವನು, ಕೆಟ್ಟಗುಣ ಉಳ್ಳವನು, ಅಸ್ಥಿರಮತಿಯು, ಸಂತಾನ ಚಿಂತೆ, ಅಲ್ಪಪುತ್ರರು ಉಳ್ಳವನು, ಅಲ್ಪಾಯುಷಿಯು ಆಗುತ್ತಾನೆ.

ಷಷ್ಠದಲ್ಲಿ ಮಾಂದಿ ಇದ್ದಾಗ ಜನಿಸಿದವನು ಶತ್ರುಗಳನ್ನು ನಾಶಮಾಡುವವನು, ಯಂತ್ರ ಮಂತ್ರ ಮತ್ತು ಭೂತ ವಿದ್ಯೆಗಳನ್ನು ಬಲ್ಲವನು, ಮತ್ತು ಶೂರನು ಆಗುತ್ತಾನೆ.

ಸಪ್ತಮದಲ್ಲಿ ಮಾಂದಿ ಇದ್ದಾಗ ಜನಿಸಿದವನು ಕಲಹಪ್ರಿಯನು, ವಿಷಮ ಸ್ವಭಾವದ ಹೆಂಡತಿ ಉಳ್ಳವನು, ಸಮಾಜದ್ರೋಹಿ, ಮಂದಬುದ್ಧಿ ಉಳ್ಳವನು, ಕೃತಘ್ನನು ಆಗುತ್ತಾನೆ.

ಅಷ್ಟಮದಲ್ಲಿ ಮಾಂದಿ ಇದ್ದಾಗ ಜನಿಸಿದವನು ಮುಖದಲ್ಲಿ ಕಲೆಗಳು ಉಳ್ಳವನು, ವಿಕಲನಯನ ಉಳ್ಳವನು ಮತ್ತು ಕೃಶವಾದ ಶರೀರ ಉಳ್ಳವನು ಆಗುತ್ತಾನೆ.

ನವಮದಲ್ಲಿ ಮಾಂದಿ ಇದ್ದಾಗ ಜನಿಸಿದವನು ಪಿತೃ, ಗುರುಹಿರಿಯರನ್ನು ದ್ವೇಷಿಸುವವನು, ನೀಚಕೃತ್ಯಗಳನ್ನು ಮಾಡುವವನು ಆಗುತ್ತಾನೆ.

ದಶಮದಲ್ಲಿ ಮಾಂದಿ ಇದ್ದಾಗ ಜನಿಸಿದವನು ಧಾರ್ಮಿಕ ಕಾರ್ಯಗಳನ್ನು ಮಾಡದವನು, ಲಜ್ಜಾಸ್ಪದ ಕೆಲಸಗಳನ್ನು ಮಾಡುವವನು, ಕುಲಧರ್ಮದಂತೆ ನಡೆಯದವನು, ಹೀನ ಕೆಲಸಗಳನ್ನು ಮಾಡುವವನು, ಮಾನವನ್ನು ಕಳಕೊಂಡವನು ಆಗುತ್ತಾನೆ,

ಏಕಾದಶದಲ್ಲಿ ಮಾಂದಿ ಇದ್ದಾಗ ಜನಿಸಿದವನು ಅತಿ ಸುಖಉಳ್ಳವನು, ಧನವಂತನು, ತೇಜಸ್ವಿಯು, ರೂಪವಂತನು, ಜ್ಯೇಷ್ಠ ಪುತ್ರನು ಅಥವಾ ಅಣ್ಣನನ್ನು ಕಳಕೊಂಡವನು ಆಗುತ್ತಾನೆ.

ದ್ವಾದಶದಲ್ಲಿ ಮಾಂದಿ ಇದ್ದಾಗ ಜನಿಸಿದವನು ವಿಷಯಾಸಕ್ತಿ ಇಲ್ಲದವನಂತೆ ನಟಿಸುವವನು, ವಾಕ್ಪಟು, ಸಿಹಿಯಾದ ಮಾತುಗಳಿಂದ ಧನಗಳಿಸುವವನು, ಕೃಪಣನು ಆಗುತ್ತಾನೆ.

ಮಾಂದಿಸ್ಥಿತ ರಾಶ್ಯಾಧಿಪತಿಯು ಬಲಿಷ್ಠನಾಗಿ ಕೇಂದ್ರ, ತ್ರಿಕೋಣ, ಸ್ವಕ್ಷೇತ್ರ, ಉಚ್ಚ ಅಥವಾ ಮಿತ್ರಕ್ಷೇತ್ರದಲ್ಲಿ ಇದ್ದರೆ ಜಾತಕನು ರಥ, ಆನೆ, ಕುದುರೆ (ವಾಹನ) ಮೊದಲಾದವುಗಳ ಒಡೆಯನು, ಮನ್ಮಥನಂತೆ ಸೌಂದರ್ಯ ಉಳ್ಳವನು, ಅತ್ಯಂತ ಯಶಸುಳ್ಳ ರಾಜನಾಗಿ ಭೂಮಂಡಲವನ್ನು ಆಳುತ್ತಾನೆ.

ಮಾಂದಿಯು ರವಿಯ ಯುತಿಯಲ್ಲಿದ್ದರೆ ಆತ್ಮಾಭಿಮಾನ ಇಲ್ಲದವನು, ತಂದೆಯನ್ನು ದ್ವೇಷಿಸುವವನು ಅಥವಾ ತಂದೆಗೆ ಹಾನಿ ಆಗುತ್ತದೆ. ಚಂದ್ರನ ಯುತಿಯಲ್ಲಿದ್ದರೆ ಮಾನಸಿಕ ಅಶಾಂತಿ ಉಳ್ಳವನು, ತಾಯಿಗೆ ದುಃಖವನ್ನು ನೀಡುವವನು ಆಗುತ್ತಾನೆ.

ಕುಜನ ಯುತಿಯಲ್ಲಿದ್ದರೆ ಬೆಂಕಿಯಿಂದ ಹಾನಿ ಮತ್ತು ತಮ್ಮಂದಿರನ್ನು ಕಳೆಕೊಳ್ಳುವನು. ಬುಧನ ಯುತಿಯಲ್ಲಿ ವಿದ್ಯಾಭ್ಯಾಸದಲ್ಲಿ ವಿಘ್ನ, ಉನ್ಮಾದ, ಚಿತ್ತಭ್ರಮೆ ಸಂಭವಿಸುತ್ತದೆ. ಗುರುವಿನ ಯುತಿಯಲ್ಲಿದ್ದರೆ ನಾಸ್ತಿಕತೆ, ಅನಾವಶ್ಯಕ ಹೆಚ್ಚು ಮಾತಾಡುವವನು. ಪರರನ್ನು ದೂಷಿಸುವವನು ಆಗುತ್ತಾನೆ. ಶುಕ್ರನ ಯುತಿಯಲ್ಲಿದ್ದರೆ ಕಾಮುಕತೆ, ಸ್ತ್ರೀರೋಗದಿಂದ ಪೀಡಿತನು ಆಗುತ್ತಾನೆ. ಶನಿಯ ಯುತಿಯಲ್ಲಿದ್ದರೆ ಸುಖವಂತನು, ಭೋಗವಂತನು, ವ್ಯಾಧಿತನು, ಅಲ್ಪಾಯುವು ಆಗುತ್ತಾನೆ. ರಾಹುವಿನ ಯುತಿಯಲ್ಲಿ ವಿಷದಿಂದ ಪೀಡೆ, ಕೇತುವಿನ ಯುತಿಯಲ್ಲಿ ಅಗ್ನಿಭಯ, ಕೃತ್ರಿಮ ಅಥವಾ ಕ್ಷುದ್ರಜಂತುಗಳಿಂದ ಪೀಡೆ ಉಂಟಾಗುತ್ತದೆ.

1. ಮಾಂದಿಯ ತ್ರಿಕೋಣದಲ್ಲಿ ಜನ್ಮಲಗ್ನ ಇರುತ್ತದೆ. 2. ಮಾಂದಿಯ ನವಾಂಶ ಮತ್ತು ಲಗ್ನನವಾಂಶ ಅಥವಾ ಮಾಂದಿಯ ದ್ವಾದಶಾಂಶ ಮತ್ತು ಲಗ್ನದ್ವಾದಶಾಂಶ ಒಂದೇ ಇರುತ್ತದೆ, 3. ಮಾಂದಿಯ ಯುತಿಯಲ್ಲಿ ಇರುವ ಗ್ರಹರ ಮತ್ತು ಮಾಂದಿಸ್ಥಿತರಾಶ್ಯಾಧಿಪತಿ ಅಶುಭಫಲವನ್ನು ನೀಡುತ್ತಾರೆ. 4. ಮಾಂದಿಯ ತ್ರಿಕೋಣರಾಶಿಯಲ್ಲಿ ಶನಿಯು ಗೋಚರಿಸುವಾಗ ರಾತ್ರಿಕಾಲದಲ್ಲಿ ಜನಿಸಿದವರ ಮರಣ ಕಾಲವನ್ನು ಸೂಚಿಸುತ್ತಾನೆ, 5. ಗುಳಿಕಸ್ಥಿತರಾಶಿಯಿಂದ ಸಪ್ತಮದ ತ್ರಿಕೋಣರಾಶಿಯಲ್ಲಿ (ಮಾಂದಿಸ್ಥಿತರಾಶಿಯಿಂದ ತೃತೀಯ ಮತ್ತು ಲಾಭ) ಶನಿಯು ಗೋಚರಿಸುವಾಗ ಹಗಲಿನಲ್ಲಿ ಜನಿಸಿದವರ ಮರಣ ಕಾಲವನ್ನು ಸೂಚಿಸುತ್ತಾನೆ.

ಗುಳಿಕನು ದೋಷ ನೀಡುವುದರಲ್ಲಿ ಬಲಿಷ್ಠನು, ಯಮಕಂಟಕನು ಶುಭಫಲ ನೀಡುವುದರಲ್ಲಿ ಬಲಿಷ್ಠನು ಆಗಿರುತ್ತಾನೆ. ಇತರ ಉಪಗ್ರಹರು ಮಾಂದಿಯು ನೀಡುವ ದೋಷದ ಅರ್ಧದಷ್ಟು ದುಃಖಫಲ ನೀಡುತ್ತಾರೆ. ಗುಳಿಕನು ಶನಿಯಂತೆ, ಯಮಕಂಟಕನು ಗುರುವಿನಂತೆ, ಅರ್ಧ ಪ್ರಹಾರನು ಬುಧನಂತೆ ಮತ್ತು ಕಾಲನು ರಾಹುವಿನಂತೆ ಫಲನೀಡುತ್ತಾನೆ.

# ೪೭. ದ್ವಿಗ್ರಹಯೋಗಗಳು

ಜನನ ಕಾಲದಲ್ಲಿ ಎರಡು ಗ್ರಹರು ಒಂದು ರಾಶಿಯಲ್ಲಿ ಇದ್ದರೆ ದ್ವಿಗ್ರಹ ಯೋಗ ಆಗುತ್ತದೆ. ಎರಡು ಗ್ರಹರ ಅಂತರವು 5°ಯು ಒಳಗಿದ್ದರೆ ಯೋಗಜ ಫಲವು ಪುಷ್ಟ ಆಗುತ್ತದೆ. ಸಾಮಾನ್ಯವಾಗಿ ದ್ವಿಗ್ರಹಯೋಗಗಳು ಆರ್ಥಿಕ ದೃಷ್ಟಿಯಿಂದ ಉತ್ತಮವಲ್ಲ. ಆದರೆ ಕೆಲವೊಂದು ದ್ವಿಗ್ರಹಯೋಗ ಗಳು ಶುಭಫಲವನ್ನು ನೀಡುತ್ತವೆ. ದ್ವಿಗ್ರಹಯೋಗಫಲವನ್ನು ಈ ಮುಂದೆ ಬರೆದಿರುತ್ತದೆ.

**1. ಸೂರ್ಯ-ಚಂದ್ರಯುತಿ:** ಇದು ಅಮಾವಾಸ್ಯೆಯಂದು ಸಂಭವಿಸುತ್ತದೆ. ಈಯೋಗದಲ್ಲಿ ಜನಿಸಿದವನು ಯಂತ್ರ ಕಾರ್ಯಗಳಲ್ಲಿ ಕುಶಲನು, ಶಿಲ್ಪಿಗಳು, ಧಾತು ತಜ್ಞನು, ಸಂಶೋಧಕರು ಆಗುತ್ತಾರೆ. ಆದ್ದರಿಂದ ಅಮಾವಾಸ್ಯೆಯ ಜನನವು ಶುಭ.

**2. ಸೂರ್ಯ-ಕುಜಯುತಿ:** ಈ ಯುತಿಯಲ್ಲಿ ಜನಿಸಿದವನು ಕ್ರೂರ ಸ್ವಭಾವದವನು, ಪಾಪಕಾರ್ಯನಿರತನು ಆಗುತ್ತಾನೆ.

**3. ಸೂರ್ಯ-ಬುಧಯುತಿ:** ಈ ಯುತಿಯಲ್ಲಿ ಜನಿಸಿದವನು ಬುದ್ಧಿವಂತನು, ನಿಪುಣನು, ಪ್ರಖ್ಯಾತನು, ಸುಖವಂತನು, ಯಶಸ್ವಿಯು ಆಗುತ್ತಾನೆ.

**4. ಸೂರ್ಯ-ಗುರುಯುತಿ:** ಈ ಯುತಿಯಲ್ಲಿ ಜನಿಸಿದವನು ಕ್ರೂರಸ್ವಭಾವದವನು. ಪಾಪಕಾರ್ಯನಿರತನು ಆಗುತ್ತಾನೆ.

**5. ಸೂರ್ಯ-ಶುಕ್ರಯುತಿ:** ಈ ಯುತಿಯಲ್ಲಿ ಜನಿಸಿದವನು ನಟನಾಗುತ್ತಾನೆ. ಅಥವಾ ಆಯುಧಗಳಿಂದ ಧನಸಂಪಾದನೆ ಮಾಡುತ್ತಾನೆ.

**6. ಸೂರ್ಯ-ಶನಿಯುತಿ:** ಈ ಯುತಿಯಲ್ಲಿ ಜನಿಸಿದವನು ಲೋಹದ ಕೆಲಸಗಳಲ್ಲಿ ಅಥವಾ ನಾನಾತರದ ವ್ಯಾಪಾರಗಳಲ್ಲಿ ಕುಶಲನು ಆಗುತ್ತಾನೆ.

**7. ಚಂದ್ರ-ಕುಜಯುತಿ:** ಈ ಯುತಿಯಲ್ಲಿ ಜನಿಸಿದವನು ಲೋಹದ ಉಪಕರಣಗಳ, ಪಾತ್ರೆ ಅಥವಾ ಮಣ್ಣಿನ ಪಾತ್ರೆ, ಪಾನೀಯ ಇತ್ಯಾದಿಗಳ ವ್ಯಾಪಾರ ಮಾಡುತ್ತಾನೆ. ತಾಯಿಗೆ ಅವಿಧೇಯನು ಆಗುತ್ತಾನೆ.

8. **ಚಂದ್ರ-ಬುಧಯುತಿ:** ಈ ಯುತಿಯಲ್ಲಿ ಜನಿಸಿದವನು ಸಿಹಿ ಮಾತುಗಳು ಉಳ್ಳವನು. ನಿಪುಣನು, ಭಾಗ್ಯವಂತನು ಕೀರ್ತಿವಂತನು ಆಗುತ್ತಾನೆ.

9. **ಚಂದ್ರ-ಗುರುಯುತಿ:** ಈ ಯುತಿಯಲ್ಲಿ ಜನಿಸಿದವನು ಶತ್ರುಜಿತನು. ತನ್ನ ಕುಲದಲ್ಲಿ ಮುಖ್ಯನು, ಧನವಂತನು, ಚಂಚಲಚಿತ್ತನು ಆಗುತ್ತಾನೆ.

10. **ಚಂದ್ರ-ಶುಕ್ರಯುತಿ:** ಈ ಯುತಿಯಲ್ಲಿ ಜನಿಸಿದವನು ನೇಕಾರನು, ವಸ್ತ್ರ ಸುಗಂಧ ದ್ರವ್ಯಾದಿಗಳ ಕ್ರಯ-ವಿಕ್ರಯ ಕುಶಲನು ಆಗುತ್ತಾನೆ.

11. **ಚಂದ್ರ-ಶನಿಯುತಿ:** ಈ ಯುತಿಯಲ್ಲಿ ಜನಿಸಿದವನು ಯಾವಾಗಲೂ ಯೋಚನೆ ಉಳ್ಳವನು. ಧನವನ್ನು ಕಳಕೊಂಡವನು ಆಗುತ್ತಾನೆ.

12. **ಕುಜ-ಬುಧಯುತಿ:** ಈ ಯುತಿಯಲ್ಲಿ ಜನಿಸಿದವನು ತೈಲ, ಬೇರುಗಳು, ಔಷಧಿ. ಇತ್ಯಾದಿ ವ್ಯಾಪಾರ ಮತ್ತು ಮಲ್ಲಯುದ್ಧ ಮಾಡುವವನು ಆಗುತ್ತಾನೆ.

13. **ಕುಜ-ಗುರುಯುತಿ:** ಈ ಯುತಿಯಲ್ಲಿ ಜನಿಸಿದವನು ನಗರ ಸಭಾಪತಿ. ಅಥವಾ ಮಂತ್ರಿ. ಧನವಂತನು ಆಗುತ್ತಾನೆ.

14. **ಕುಜ-ಶುಕ್ರಯುತಿ:** ಈ ಯುತಿಯಲ್ಲಿ ಜನಿಸಿದವನು ಪಶು ಪಾಲಕನು, ಮಲ್ಲಯುದ್ಧಮಾಡುವವನು, ನಿಪುಣನು, ಪರಯುವತಿರತನು, ಜೂಜಾಡುವವನು, ಆಗುತ್ತಾನೆ.

15. **ಕುಜ-ಶನಿಯುತಿ:** ಈ ಯುತಿಯಲ್ಲಿ ಜನಿಸಿದವನು ಅಸತ್ಯವಂತನು. ನಿಂದಿತನು, ದುಃಖಿತನು ಆಗುತ್ತಾನೆ.

16. **ಬುಧ-ಗುರುಯುತಿ:** ಈ ಯುತಿಯಲ್ಲಿ ಜನಿಸಿದವನು ನಟನು, ಸಂಗೀತ ಪ್ರಿಯನು, ನಾಟ್ಯ ಬಲ್ಲವನು ಆಗುತ್ತಾನೆ.

17. **ಬುಧ-ಶುಕ್ರಯುತಿ:** ಈ ಯುತಿಯಲ್ಲಿ ಜನಿಸಿದವನು ವಾಕ್ಚಾತುರ್ಯಉಳ್ಳವನು, ಭೂಪಾಲಕನು. ಸಮಾಜ. ಸಂಘ ಸಂಸ್ಥೆಗಳ ನಾಯಕನು ಆಗುತ್ತಾನೆ.

**18. ಬುಧ-ಶನಿಯುತಿ:** ಈ ಯುತಿಯಲ್ಲಿ ಜನಿಸಿದವನು ಮೃದುವಾಗಿ ಮಾತಾಡಿ ಮೋಸ ಮಾಡುವವನು, ಗುರುಹಿರಿಯರಿಗೆ ಅವಿಧೇಯನು ಆಗುತ್ತಾನೆ.

**19. ಗುರು-ಶುಕ್ರಯುತಿ:** ಈ ಯುತಿಯಲ್ಲಿ ಜನಿಸಿದವನು ಉತ್ತಮವಾದ ವಿದ್ಯೆಉಳ್ಳವನು, ಧನಸಂಪತ್ತು, ಪತ್ನಿ ಮತ್ತು ಉತ್ತಮವಾದ ಗುಣಗಳು ಉಳ್ಳವನು ಆಗುತ್ತಾನೆ.

**20. ಗುರು-ಶನಿಯುತಿ:** ಈ ಯುತಿಯಲ್ಲಿ ಜನಿಸಿದವನು ಹೀನವೃತ್ತಿಯಿಂದ ಜೀವಿಸುವವನು, ನಾಪಿತನು, ಕುಂಬಾರನು, ಅಥವಾ ಅಡಿಗೆಯವನು ಆಗುತ್ತಾನೆ.

**21. ಶುಕ್ರ-ಶನಿಯುತಿ:** ಈ ಯುತಿಯಲ್ಲಿ ಜನಿಸಿದವನು ದೃಷ್ಟಿದೋಷ ಉಳ್ಳವನು, ವಿವಾಹದ ನಂತರ ಧನಸಂಪತ್ತುಗಳ ಅಭಿವೃದ್ಧಿ ಹೊಂದುವವನು, ಚಿತ್ರಕಾರನು, ಲೇಖಕನು, ಆಗುತ್ತಾನೆ.

## ೪೮. ಕರ್ಮ ಅಥವಾ ವೃತ್ತಿ

1. ಜಾತಕದಲ್ಲಿ ದಶಮಭಾವಸ್ಥಿತ ಗ್ರಹರು ವೃತ್ತಿ ಮತ್ತು ಧನ ಸಂಚಯವನ್ನು ಸೂಚಿಸುತ್ತಾರೆ. ಲಗ್ನ ಮತ್ತು ಚಂದ್ರನಿಂದ ದಶಮಸ್ಥಿತ ಗ್ರಹರಲ್ಲಿ ಬಲಿಷ್ಠನಾದ ಗ್ರಹನಿಗೆ ಅನುಗುಣವಾಗಿ ಧನಸಂಚಯ ಆಗುತ್ತದೆ. ಸೂರ್ಯನು ಬಲಿಷ್ಠನಾದರೆ ಪಿತೃಧನವನ್ನು, ಚಂದ್ರನು ಬಲಿಷ್ಠನಾದರೆ ಮಾತೃಧನವನ್ನು, ಕುಜನು ಬಲಿಷ್ಠನಾದರೆ ಶತ್ರುಧನವನ್ನು, ಬುಧನು ಬಲಿಷ್ಠನಾದರೆ ಮಿತ್ರಧನವನ್ನು, ಗುರುವು ಬಲಿಷ್ಠನಾದರೆ ಭ್ರಾತೃಧನವನ್ನು, ಶುಕ್ರನು ಬಲಿಷ್ಠನಾದರೆ ಕಳತ್ರಧನವನ್ನು, ಶನಿಯು ಬಲಿಷ್ಠನಾದರೆ ಭೃತ್ಯರಿಂದ ಧನವನ್ನು ಸಂಚಯಿಸುತ್ತಾನೆ.

2. ಲಗ್ನ ಚಂದ್ರ, ಮತ್ತು ಸೂರ್ಯನಿಂದ, ದಶಮಾಧಿಪತಿಯಲ್ಲಿ ಬಲಿಷ್ಠನಾದವನು, ಸ್ಥಿತ ನವಾಂಶಾಧಿಪತಿಗೆ ಅನುಗುಣವಾದ ವೃತ್ತಿಯನ್ನು ಜಾತಕನು ಹೊಂದುವನು.

3. ಷಷ್ಠಭಾವವು ಕರ್ಮಸ್ಥಾನದ ಭಾಗ್ಯಸ್ಥಾನ ಆಗಿರುತ್ತದೆ. ಆದ್ದರಿಂದ ಷಷ್ಠಭಾವದಲ್ಲಿದ್ದ ಗ್ರಹನ ಪ್ರಭಾವವು ಕರ್ಮದಲ್ಲಿ ಕಂಡುಬರುತ್ತದೆ.

4. ಮೇಲೆ ಹೇಳಿದಂತೆ ಬಲಿಷ್ಠನಾದ ದಶಮಾಧಿಪತಿಯನ್ನು ಶೋಧಿಸಿ ದಶಮಾಧಿಪತಿ ಸ್ಥಿತ ನವಾಂಶಾಧಿಪತಿಯು ಸೂರ್ಯನಾದರೆ ಜಾತಕನು ಔಷಧ ವೈದ್ಯಕೀಯ, ಉಣ್ಣೆ, ಹುಲ್ಲು, ದ್ರವ್ಯವಸ್ತುಗಳು, ಧಾನ್ಯ, ಬಂಗಾರ, ಆಭರಣ, ಸರಕಾರಿ ನೌಕರಿ ರಾಯಭಾರ ಮೊದಲಾದ ವೃತ್ತಿಯನ್ನು ಹೊಂದುವನು.

5. ನವಾಂಶಾಧಿಪತಿಯು ಚಂದ್ರನಾದರೆ ಜಲಜನ್ಯ ವಸ್ತುಗಳಿಂದ, ಕೃಷಿ ಯಿಂದ, ಮಣ್ಣಿನಿಂದ ಅಥವಾ ಮಣ್ಣಿನ ವಸ್ತುಗಳಿಂದ, ವಿವಿಧ ವಿನೋದಾವಳಿ ಗಳಿಂದ. ನೂಲು ಸ್ತ್ರೀಯರ ಅಭಿರುಚಿಯುಳ್ಳ ವಸ್ತುಗಳಿಂದ, ನಾವಿಕವೃತ್ತಿ, ಮೀನುಗಾರಿಕೆ, ಹಡಗದಲ್ಲಿ ಕೆಲಸ, ದ್ರಾವಕ ವಸ್ತುಗಳ ವ್ಯಾಪಾರ ವ್ಯವಹಾರ ಇತ್ಯಾದಿ ನಿರ್ವಹಿಸುತ್ತಾನೆ.

6. ನವಾಂಶಾಧಿಪತಿಯು ಕುಜನಾದರೆ ಧಾತು, ಲೋಹಗಳಿಂದ, ಅಗ್ನಿಜ ವಸ್ತುಗಳಿಂದ, ಬೆಂಕಿಯ ಹತ್ತಿರ ಕೆಲಸ, ಯಂತ್ರದ ಕೆಲಸ, ಯುದ್ಧದಿಂದ ಅಥವಾ ಸೈನಿಕ ವೃತ್ತಿಯಿಂದ, ಜಗಳ ಸಂಧಾನಗಳಿಂದ, ಕಳ್ಳತನ, ಮೋಸ, ವಂಚನೆ ಇತ್ಯಾದಿಗಳಿಂದ ಜೀವನ ನಿರ್ವಹಿಸುತ್ತಾನೆ.

7. ನವಾಂಶಾಧಿಪತಿಯು ಬುಧನಾದರೆ ಶಿಲ್ಪಕಲೆ, ಚಿತ್ರಕಲೆ, ಛಾಯಾಚಿತ್ರ ಗಳಿಂದ ಕಾವ್ಯ, ಗಣಿತ, ಜ್ಯೋತಿಷ, ಶಿಕ್ಷಕ, ಧಾರ್ಮಿಕ ಕೆಲಸಗಳು, ಪುಸ್ತಕ ಲೇಖನ, ಪ್ರಕಾಶನ, ಅಥವಾ ಪುಸ್ತಕ ವ್ಯಾಪಾರ, ವಕೀಲ ವೃತ್ತಿ ಇತ್ಯಾದಿಗಳಿಂದ ಜೀವನ ನಿರ್ವಹಿಸುತ್ತಾನೆ.

8. ನವಾಂಶಾಧಿಪತಿಯು ಗುರುವಾದರೆ ಧಾರ್ಮಿಕ ಸಂಸ್ಥೆಗಳಿಂದ, ನ್ಯಾಯಾ ಧೀಶ, ಬೋಧನೆಯಿಂದ ಮಂತ್ರಿ, ಗ್ರಾಮಾಧಿಕಾರಿ, ಕೋಶಾಧಿಕಾರಿ, ಇತ್ಯಾದಿ ವೃತ್ತಿಗಳಿಂದ ಜೀವನ ನಿರ್ವಹಿಸುತ್ತಾನೆ.

9. ನವಾಂಶಾಧಿಪತಿಯು ಶುಕ್ರನಾದರೆ, ಬಂಗಾರ, ಮುತ್ತು ಹವಳ, ಅಶ್ವ ವಾಹನಗಳು, ಬೆಲ್ಲ, ಅಥವಾ ಸಿಹಿ ವಸ್ತುಗಳು, ಆಮ್ಲ, ಕ್ಷಾರ, ಪಶುಜನ್ಯ ವಸ್ತು ಗಳಿಂದ, ವಾದ್ಯ, ಸಂಗೀತಗಳಿಂದ, ತಿಂಡಿಗಳಿಂದ, ಸ್ತ್ರೀಯರಿಂದ, ಪರಿಮಳದ್ರವ್ಯ ಇತ್ಯಾದಿಗಳಿಂದ ಜೀವನ ನಿರ್ವಹಿಸುತ್ತಾನೆ.

10. ನವಾಂಶಾಧಿಪತಿಯು ಶನಿಯಾದರೆ ಹೀನ ಅಥವಾ ನೀಚಕಾರ್ಯ ಗಳಿಂದ, ಆಯಾಸ, ಭಾರವಾದ ಕೆಲಸ, ಕೂಲಿಕೆಲಸ, ಕ್ರೂರಕರ್ಮ. ಎಲೆ, ಕಲ್ಲು, ಮಣ್ಣು, ಇಟ್ಟಿಗೆ, ಸಿಮೆಂಟು, ಮನೆ ಕಟ್ಟುವುದು ಅಥವಾ ಕಟ್ಟಿಸುವುದು, ಕಂಟ್ರಾಕ್ಟ್ ಕೆಲಸ, ಸಾರಿಗೆ-ಸಂಪರ್ಕ, ಪಶುಗಳ ವ್ಯಾಪಾರ, ಚರ್ಮ, ಎಣ್ಣೆ, ಗಾಣ, ಕಸಾಯಿಖಾನೆ, ಲೋಕೋಪಯೋಗಿ ಇಲಾಖೆ ದಲಾಲಿ ಇತ್ಯಾದಿ ವ್ಯಾಪಾರ ವ್ಯವಹಾರ ಇತ್ಯಾದಿಯಿಂದ ಜೀವನ ನಿರ್ವಹಿಸುತ್ತಾನೆ.

11. ಕರ್ಮಸ್ಥಾನದಲ್ಲಿ ಶುಭಗ್ರಹರಿದ್ದರೆ ಹೆಚ್ಚು ಶ್ರಮವಿಲ್ಲದೆ ಧನಸಂಪತ್ತನ್ನು ಗಳಿಸುತ್ತಾನೆ. ಪಾಪಗ್ರಹರಾದರೆ ಕರ್ಮಕ್ಕೆ ತಕ್ಕ ಪ್ರತಿಫಲ ಲಭಿಸುವುದಿಲ್ಲ. ಹೆಚ್ಚು ಶ್ರಮ ಕಮ್ಮಿ ಲಾಭ ನೀಡುತ್ತಾರೆ. ದಶಮಾಧಿಪತಿಯು ಶುಭಗ್ರಹ ಯುತ. ಶುಭಮಧ್ಯ ಅಥವಾ ಶುಭದೃಷ್ಟನಾದರೆ ಅಥವಾ ಶುಭನವಾಂಶದಲ್ಲಿ ಇದ್ದರೆ ಉತ್ತಮ ಫಲ ಲಭಿಸುತ್ತದೆ. ಪಾಪಗ್ರಹ ಸಂಬಂಧದಿಂದ ಪರಿಶ್ರಮ ಅಥವಾ ಅಶುಭ ಫಲ ಲಭಿಸುತ್ತದೆ.

12. ನವಾಂಶಾಧಿಪತಿಯು ಬಲಿಷ್ಠನಾದರೆ ಜಾತಕನಿಗೆ ಅಧಿಕ ಪರಿಶ್ರಮ ವಿಲ್ಲದೆ ಧನ-ಸಂಪತ್ತು ಲಭಿಸುತ್ತದೆ. ನವಾಂಶಾಧಿಪತಿಯು ಬಲಹೀನನಾದರೆ ಅಲ್ಪ ಪ್ರಮಾಣದಲ್ಲಿ ಧನ-ಸಂಪತ್ತು ಲಭಿಸುತ್ತದೆ. ನವಾಂಶಾಧಿಪತಿ ಸೂಚಿಸುವ ದಿಕ್ಕಿನಲ್ಲಿ ಕರ್ಮಕ್ಷೇತ್ರ ಇದೆ. ದಶಮರಾಶಿಯು ಸೂಚಿಸುವ ಊರಿನಲ್ಲಿ ಜಾತಕನು ಧನ-ಸಂಪತ್ತನ್ನು ಗಳಿಸುತ್ತಾನೆ.

13. ಕರ್ಮಭಾವವು ಅಧಿಪತಿಯಿಂದ ದೃಷ್ಟ ಅಥವಾ ಯುತವಾದರೆ ಸ್ವದೇಶದಲ್ಲಿಯೇ, ಇತರ ಗ್ರಹರಿಂದ ದೃಷ್ಟ ಅಥವಾ ಯುತನಾದರೆ ಅನ್ಯದೇಶದಲ್ಲಿ ವೃತ್ತಿ ನಿರ್ವಹಿಸುತ್ತಾನೆ.

14. ದಶಮಾಧಿಪತಿಯು ಸ್ಥಿರರಾಶಿಯ ನವಾಂಶದಲ್ಲಿ ಇದ್ದರೆ ಸ್ವದೇಶದಲ್ಲಿ ಚರ ರಾಶಿಯ ನವಾಂಶದಲ್ಲಿ ಇದ್ದರೆ ಪರದೇಶ ಅಥವಾ ವಿದೇಶ ಮತ್ತು ಉಭಯರಾಶಿಯ ನವಾಂಶದಲ್ಲಿ ಇದ್ದರೆ ಸ್ವದೇಶದಲ್ಲಿ ವೃತ್ತಿಯಲ್ಲಿದ್ದು ಉದ್ಯೋಗ ನಿಮಿತ್ತ ಆಗ್ಗಾಗ್ಗೆ ಅನ್ಯದೇಶ ಸಂಚಾರ ಮಾಡುತ್ತಾನೆ,

# ೪೯. ನಕ್ಷತ್ರ ದಶಾಫಲ

| | | | | | |
|---|---|---|---|---|---|
| ಕೃತ್ತಿಕಾ | ಉತ್ತರಾ | ಉತ್ತರಾಷಾಢಾ ನಕ್ಷತ್ರ | ರವಿದಶಾ | ವರ್ಷ | 6 |
| ರೋಹಿಣೀ | ಹಸ್ತ | ಶ್ರವಣ | ಚಂದ್ರದಶಾ | ,, | 10 |
| ಮೃಗಶಿರಾ | ಚಿತ್ರಾ | ಧನಿಷ್ಠಾ | ಕುಜದಶಾ | ,, | 7 |
| ಆರ್ದ್ರಾ | ಸ್ವಾತೀ | ಶತಭಿಷಾ | ರಾಹುದಶಾ | ,, | 18 |
| ಪುನರ್ವಸು | ವಿಶಾಖಾ | ಪೂರ್ವಾಭಾದ್ರಾ | ಗುರುದಶಾ | ,, | 16 |
| ಪುಷ್ಯ | ಅನುರಾಧಾ | ಉತ್ತರಾಭಾದ್ರಾ | ಶನಿದಶಾ | ,, | 19 |
| ಆಶ್ಲೇಷಾ | ಜ್ಯೇಷ್ಠಾ | ರೇವತಿ | ಬುಧದಶಾ | ,, | 17 |
| ಮಘಾ | ಮೂಲ | ಅಶ್ವಿನೀ | ಕೇತುದಶಾ | ,, | 7 |
| ಹುಬ್ಬಾ | ಪೂರ್ವಾಷಾಢಾ | ಭರಣೀ | ಶುಕ್ರದಶಾ | ,, | 20 |

ಜನನಕಾಲದ ನಕ್ಷತ್ರಕ್ಕೆ ಅನುಗುಣವಾದ ಗ್ರಹದಶಾ ವರ್ಷವನ್ನು ಶಿಷ್ಟ ನಕ್ಷತ್ರ ಪರಿಮಾಣಕ್ಕೆ ಸರಿಯಾಗಿ ಕಂಡುಹಿಡಿಯಬೇಕು. ಇದು ಜನನ ಕಾಲಕ್ಕೆ ನಡೆಯುವ ಗರ್ಭಶಿಷ್ಟ ಮಹರ್ದಶೆ ಆಗಿರುತ್ತದೆ. ಅನಂತರ ಮೇಲಿನ ಕ್ರಮದಂತೆ ದಶೆಗಳು ಕೊಟ್ಟ ವರ್ಷದಷ್ಟು ನಡೆಯುವುದು. ಒಂಭತ್ತು ಗ್ರಹರ ಒಟ್ಟು ದಶೆಯು 120 ವರ್ಷ ಆಗುತ್ತದೆ.

**ರವಿದಶಾಫಲ:** ರವಿದಶೆಯಲ್ಲಿ ಜಾತಕನು ನಖ, ದಂತ, ಚರ್ಮ, ಬಂಗಾರ ಇತ್ಯಾದಿಗಳ ವ್ಯಾಪಾರದಿಂದ, ಕ್ರೂರತನ, ಸಂಚಾರ, ಸಹಕಾರ ಅಥವಾ ಜಗಳದಿಂದ ಧನ ಸಂಪಾದಿಸುತ್ತಾನೆ. ಈ ದಶಾಕಾಲದಲ್ಲಿ ಜಾತಕನು ಶೀಘ್ರ ಕೋಪಿಯು, ಹಿಡಿದ ಕಾರ್ಯವನ್ನು ಸಾಧಿಸುವವನು, ಧೈರ್ಯ ಮತ್ತು ಶೌರ್ಯ ದಿಂದ ಕೀರ್ತಿಯನ್ನು ಪಡೆಯುವವನು ಆಗುತ್ತಾನೆ. ಕಳತ್ರ ಸಂಬಂಧವಾಗಿ ದುಃಖ, ತೊಂದರೆಗಳು ಸಂಭವಿಸುತ್ತವೆ. ಮಕ್ಕಳಿಂದ, ಶತ್ರುಗಳಿಂದ, ಆಯುಧ, ಬೆಂಕಿ ಮತ್ತು ರಾಜಕೀಯದಿಂದ ಸಂಕಷ್ಟಗಳು ಉಂಟಾಗುತ್ತವೆ. ಈ ದಶೆಯಲ್ಲಿ ಜಾತಕನು ಉದಾರವಂತನಾದರೂ ಪಾಪಕರ್ಮಗಳನ್ನು ಮಾಡುತ್ತಾನೆ. ಸಹೋದರ ಅಥವಾ ಸೇವಕರೊಡನೆ ವಾದವಿವಾದ ಸಂಭವಿಸುತ್ತದೆ. ಪಿತ್ತ ರೋಗ ಉದರದ ಮತ್ತು ಎದೆಗೆ ಸಂಬಂಧಿಸಿದ ರೋಗಗಳು ಉತ್ಪನ್ನ ಆಗುತ್ತದೆ. ಕೋರ್ಟುವ್ಯವಹಾರಗಳು ಸಂಭವಿಸುತ್ತವೆ.

ಚಂದ್ರದಶಾಫಲ: ಚಂದ್ರದಶೆಯಲ್ಲಿ ಜಾತಕನು, ಭಾಷಣ, ವಾತ, ಪ್ರವಚನ, ವ್ಯವಹಾರ, ವಿಜ್ಞಾನ, ದೇವತಾರಾಧನೆ, ಧಾರ್ಮಿಕ ಸಂಸ್ಥೆಗಳಿಂದ, ಕಬ್ಬು, ಹಾಲು, ನೀರು, ಜಲದ್ರವ್ಯಗಳು, ವಸ್ತ್ರ, ಪುಷ್ಪ, ಕ್ರೀಡೆ, ಎಣ್ಣೆಯ ಬೀಜ, ಆಹಾರ ವಸ್ತುಗಳ ವ್ಯಾಪಾರದಿಂದ ಧನಸಂಪಾದನೆ ಮಾಡುತ್ತಾನೆ. ಪರಿಶ್ರಮ ಅಥವಾ ಸೇವೆಯಿಂದ ಧನಗಳಿಸುತ್ತಾನೆ. ಈ ದಶೆಯಲ್ಲಿ ಜಾತಕನು ಹೆಚ್ಚು ನಿದ್ರೆ ಉಳ್ಳವನು, ಆಲಸ್ಯವಂತನು, ಮತ್ತು ಕಷ್ಟಸಹಿಷ್ಣುವು ಆಗುತ್ತಾನೆ. ದೇವ ಬ್ರಾಹ್ಮಣ ಪೂಜಕನು ಆಗುತ್ತಾನೆ. ಸ್ತ್ರೀ ಸಂತತಿಯನ್ನು ಪಡೆಯುತ್ತಾನೆ. ಕುಶಲತೆಯಿಂದ ಕೀರ್ತಿವಂತನು ಆಗುತ್ತಾನೆ. ಆದರೆ ಉತ್ಪತ್ತಿ ಮತ್ತು ಖರ್ಚು ಸಮಾನ ಆಗಿರುತ್ತದೆ. ಕಲಹ ಮತ್ತು ಸ್ವಜನರೊಂದಿಗೆ ಭೇಧಾಭಿಪ್ರಾಯ ಉಂಟಾಗುತ್ತದೆ.

ಕುಜದಶಾಫಲ : ಕುಜದಶೆಯಲ್ಲಿ ವೈರಿಗಳ ನಾಶ ಉಂಟಾಗುತ್ತದೆ. ಸರಕಾರ, ಯಂತ್ರ ಅಥವಾ ಭೂಮಿಯಿಂದ ಉತ್ಪಾದನೆ ಗಳಿಸುತ್ತಾನೆ. ಸಹೋದರರಿಂದ, ಉಣ್ಣೆಯ ವ್ಯಾಪಾರದಿಂದ ಲಾಭಹೊಂದುತ್ತಾನೆ. ಮಕ್ಕಳೊಂದಿಗೆ ಜಗಳ ಅಥವಾ ಭೇಧಾಭಿಪ್ರಾಯ ಉಂಟಾಗುತ್ತದೆ. ಹೆಂಡತಿ, ಮಿತ್ರ, ಸಹೋದರ ಅಥವಾ ವಿದ್ವಾಂಸರೊಂದಿಗೆ ಕಲಹ ಸಂಭವಿಸುತ್ತದೆ. ಬಾಯಾರಿಕೆ ಜಾಸ್ತಿ, ರಕ್ತಕ್ಕೆ ಸಂಬಂಧಿಸಿದ ವ್ಯಾಧಿಗಳು, ಜ್ವರ, ಪಿತ್ತಪ್ರಕೋಪ, ಎಲುಬು ಮುರಿಯುವುದು ಇತ್ಯಾದಿಗಳಿಂದ ಪೀಡಿಸಲ್ಪಡುತ್ತಾನೆ. ಸ್ವಲ್ಪ ಮಟ್ಟಿಗೆ ಪಾಪಕಾರ್ಯ ಅಥವಾ ಕ್ರೂರಕರ್ಮಗಳಲ್ಲಿ ನಿರತನು. ಅಧಾರ್ಮಿಕ ಪ್ರವೃತ್ತಿ ಉಳ್ಳವನು ಆಗುತ್ತಾನೆ. ಈ ದಶಾಕಾಲದಲ್ಲಿ ಜಾತಕನು ಹೆಚ್ಚು ಕೋಪ ಉಳ್ಳವನು, ತೀಕ್ಷ್ಣವಾದ ಮಾತುಗಳನ್ನು ಆಡುವವನು ಆಗುತ್ತಾನೆ.

ರಾಹುದಶಾಫಲ : ರಾಹುದಶೆಯಲ್ಲಿ ಜಾತಕನಿಗೆ ಸರಕಾರದಿಂದ, ಕಳ್ಳಕಾಕರಿಂದ, ವಿಷದಿಂದ, ಬೆಂಕಿಯಿಂದ ಅಥವಾ ಆಯುಧಗಳಿಂದ ಅಪಾಯ ಸಂಭವಿಸುತ್ತದೆ. ಮಕ್ಕಳಿಗೆ ಅನಾರೋಗ್ಯ, ಮಾನಸಿಕಪೀಡೆ, ಕುಟುಂಬ ಕಲಹ, ಸ್ವಜನರಿಂದ ನಷ್ಟ, ನೀಚರಿಂದ ಮಾನಭಂಗ ಮತ್ತು ಅಪವಾದಗಳು ಸಂಭವಿಸುತ್ತವೆ. ವೃತ್ತಿಯಿಂದ ನಿವೃತ್ತಿ ಅಥವಾ ವ್ಯಾಪಾರದಲ್ಲಿ ಹಾನಿ ಉಂಟಾಗುತ್ತದೆ. ಕನ್ಯಾ, ಮೀನ ಮತ್ತು ವೃಶ್ಚಿಕದ ರಾಹುದಶಾ ಕಾಲದಲ್ಲಿ ಅಭಿಮಾನ, ಸುಖ ಸಂತೋಷ, ಮಾನ್ಯತೆ, ಭೂಸಂಪತ್ತು, ವಾಹನಗಳು, ಭೃತ್ಯಜನರು ಇತ್ಯಾದಿ ಲಭಿಸುತ್ತವೆ. ಧನಸಂಪತ್ತನ್ನು ಗಳಿಸಿ ಖ್ಯಾತವಂತನು ಆಗುತ್ತಾನೆ. ಆದರೆ

ದಶಾಅಂತ್ಯಕಾಲದಲ್ಲಿ ಎಲ್ಲವನ್ನು ಕಳಕೊಳ್ಳುತ್ತಾನೆ. ಶುಭಗ್ರಹಯುತನಾದ ರಾಹುವು ಶುಭಭಾವಗತನಾದರೆ ಮನುಷ್ಯನನ್ನು ಉನ್ನತ ಮಟ್ಟಕ್ಕೆ ಏರಿಸುತ್ತಾನೆ. ಅಧಿಕಾರವನ್ನು ನೀಡುತ್ತಾನೆ. ಕೈಕೊಂಡ ಕಾರ್ಯಗಳಲ್ಲಿ ಯಶಸ್ಸು ಲಭಿಸುತ್ತದೆ. ಸಕಲ ಮನೋಭೀಷ್ಟಗಳು ಪೂರೈಸಲ್ಪಡುತ್ತವೆ. ಧನಸಂಪತ್ತನ್ನು ಗಳಿಸುತ್ತಾನೆ ಮತ್ತು ಪ್ರಖ್ಯಾತನು ಆಗುತ್ತಾನೆ.

**ಗುರುದಶಾಫಲ :** ಗುರುದಶೆಯಲ್ಲಿ ಜಾತಕನು ಮಾನ್ಯತೆಯನ್ನು ಪಡೆಯುತ್ತಾನೆ. ಉತ್ತಮ ಗುಣವಂತನು, ಜ್ಞಾನವಂತನು, ಬುದ್ಧಿವಂತನು, ಆಗುತ್ತಾನೆ. ಧೈರ್ಯದಿಂದ ಉನ್ನತಮಟ್ಟಕ್ಕೆ ಏರುತ್ತಾನೆ. ಕಾಂತಿಯುತನು, ತತ್ವಜ್ಞಾನಿಯು, ಸ್ಥಿರಚಿತ್ತ ಉಳ್ಳವನು. ಭಕ್ತಿ ಉಳ್ಳವನು ಆಗುತ್ತಾನೆ. ಜ್ಞಾನ ಮತ್ತು ಪ್ರತಿಭೆಯಿಂದ, ಸರಕಾರದಿಂದ, ಮಂತ್ರ, ಯಜ್ಞ ಯಾಗಾದಿಗಳಿಂದ, ಬುದ್ಧಿವಂತಿಕೆ ಮತ್ತು ಸಾಮರ್ಥ್ಯದಿಂದ ಹಣ ಗಳಿಸುತ್ತಾನೆ. ಧನ, ಕನಕ, ಗೃಹ, ಪುತ್ರ, ವಾಹನ, ವಸ್ತ್ರಾದಿಗಳನ್ನು ಪಡೆಯುತ್ತಾನೆ. ಉತ್ತಮ ಜನರ ಸಹವಾಸ ಮತ್ತು ಮಿತ್ರತೆ, ಅಧಿಕಾರಿಗಳ ಮಿತ್ರತ್ವ ಲಭಿಸುತ್ತದೆ. ಅತೀ ಆಲೋಚನೆಯಿಂದ ತೊಂದರೆಗಳು ಸಂಭವಿಸುತ್ತದೆ. ನೀಚ ನ್ಯಾಯಬಾಹಿರ, ನಾಸ್ತಿಕ ಮತ್ತು ದುರ್ನಡತೆಯ ಜನರಿಂದ ದ್ವೇಷಿಸಲ್ಪಡುತ್ತಾರೆ. ಕಿವಿಯ ರೋಗಗಳು ಸಂಭವಿಸುತ್ತವೆ.

**ಶನಿದಶಾಫಲ:** ಶನಿದಶೆಯಲ್ಲಿ ಜಾತಕನಿಗೆ ಪ್ರಾಣಿಗಳಿಂದ ವೃದ್ಧಸ್ತ್ರೀಯಿಂದ, ಧನಲಾಭ ಆಗುತ್ತದೆ. ನಗರಸಭಾಪತಿ ಆಗುತ್ತಾನೆ. ನೀಚವೃತ್ತಿಯಿಂದ ಧನಸಂಪತ್ತನ್ನು ಗಳಿಸುತ್ತಾನೆ. ಕಫ ವಾತಸಂಬಂಧ ರೋಗಗಳು ಉದ್ಭವಿಸುತ್ತವೆ. ಕೋಪ, ಮತ್ಸರ, ಆಲಸ್ಯ ಮತ್ತು ಆಯಾಸ ಉಂಟಾಗುತ್ತವೆ. ಸೇವಕರೊಂದಿಗೆ ಜಗಳ, ಪತ್ನಿ ಪುತ್ರರೊಡನೆ ಕಲಹ ಮತ್ತು ಕಾಲುನೋವು ಸಂಭವಿಸುತ್ತದೆ.

**ಬುಧದಶಾಫಲ:** ಬುಧದಶೆಯಲ್ಲಿ ಜಾತಕನಿಗೆ ಮಿತ್ರರಿಂದ, ರಾಜ್ಯಭಾರದಿಂದ, ಸಂಸ್ಥೆಗಳಿಂದ, ಹಿರಿಯ ವ್ಯಕ್ತಿಗಳಿಂದ, ಬ್ರಾಹ್ಮಣರಿಂದ, ಧನಲಾಭ ಉಂಟಾಗುತ್ತದೆ. ತನ್ನ ವಿದ್ವತ್ತಿನಿಂದ ಪ್ರಸಿದ್ಧಿ ಹೊಂದುತ್ತಾನೆ. ಬಂಗಾರ ಜಮೀನು, ಪ್ರಾಣಿಗಳು ಲಭಿಸುತ್ತದೆ. ಸುಖವಂತನು, ಸೌಭಾಗ್ಯವಂತನು ಆಗುತ್ತಾನೆ. ಹಾಸ್ಯಜ್ಞನು, ಬುದ್ಧಿವಂತನು ಆಗುತ್ತಾನೆ. ಒಳ್ಳೇಮನಸ್ಸು ಉಳ್ಳವನು, ಧಾರ್ಮಿಕ ಪ್ರವೃತ್ತಿಯಿಂದ ಕೂಡಿದವನು ಆಗುತ್ತಾನೆ, ಅಧಿಕಶ್ರಮ

ದಿಂದ ಅನಾರೋಗ್ಯ ಉಂಟಾಗುತ್ತದೆ. ಬಂಧನ, ಮಾನಸಿಕಪೀಡೆ, ತ್ರಿದೋಷ ಪ್ರಕೋಪದಿಂದ ವ್ಯಾಧಿತನು ಆಗುತ್ತಾನೆ.

**ಕೇತುದಶಾಫಲ :** ಕೇತುದಶೆಯಲ್ಲಿ ಜಾತಕನಿಗೆ ಶತ್ರುಗಳಿಂದ ತೊಂದರೆ, ಕಳ್ಳಕಾಕರ ಭಯ, ರಾಜಭಯ, ಶಸ್ತ್ರಗಳಿಂದ ಅಪಘಾತ, ಪ್ರಕೋಪ ಮಿಥ್ಯಾಪವಾದ, ಮಾನಸಿಕ ವ್ಯಥೆ, ಕುಟುಂಬ ದೂಷಣೆ, ಅಗ್ನಿಭಯ, ವಿದೇಶವಾಸ ಇತ್ಯಾದಿ ಸಂಭವಿಸುತ್ತದೆ. ಹಲ್ಲುನೋವು, ಕಾಲುನೋವು ಮತ್ತು ಕಫ ರೋಗಗಳು ಉಂಟಾಗುತ್ತವೆ.

**ಶುಕ್ರದಶಾಫಲ:** ಶುಕ್ರದಶೆಯಲ್ಲಿ ಜಾತಕನಿಗೆ ಸಂಗೀತ, ಕ್ರೀಡಾಸೌಲಭ್ಯ, ಮತ್ತು ಸುಖಸಾಧನಗಳು ಲಭಿಸುತ್ತವೆ. ಉತ್ತಮ ಭೋಜನ, ಆಭರಣ, ವಸ್ತ್ರ, ನಿಧಿ, ಇತ್ಯಾದಿಗಳನ್ನು ಪಡೆಯುತ್ತಾನೆ. ಪ್ರಯಾಣ, ಸ್ತ್ರೀ ಸುಖ, ಜ್ಞಾನಾರ್ಜನೆ, ಶುಭಸಮಾರಂಭ, ರಾಜರಿಂದ ಉಡುಗೊರೆ, ಬಹುಮಾನ ಲಭಿಸುತ್ತದೆ. ಮಿತ್ರರಿಂದ ದುಃಖ ಉಂಟಾಗುತ್ತದೆ. ವ್ಯಾಪಾರ, ಕೃಷಿ, ಯಾನ ಇತ್ಯಾದಿಗಳಿಂದ ಧನ ಸಂಚಯ ಆಗುತ್ತದೆ.

ಮೇಲೆ ಹೇಳಿದ ದಶಾಫಲಗಳು ಸಾಮಾನ್ಯವಾಗಿ ಆಯಾ ಗ್ರಹಗಳ ದಶಾಕಾಲದಲ್ಲಿ ಫಲಿಸುತ್ತವೆ. ಆದರೆ ಗ್ರಹಸ್ಥಿತಿಗೆ ಅನುಗುಣವಾಗಿ ಅವುಗಳು ವ್ಯತ್ಯಾಸ ಹೊಂದುತ್ತವೆ. ಬಲಿಷ್ಠ, ಉಚ್ಚ, ವರ್ಗೋತ್ತಮ, ಮಿತ್ರವರ್ಗಸ್ಥಿತ, ಶುಭದೃಷ್ಟ, ಶುಭಯುತ ಗ್ರಹಗಳು ತಮ್ಮ ದಶಾಕಾಲದಲ್ಲಿ ಅಧಿಕ ಶುಭಫಲಗಳನ್ನು ನೀಡುತ್ತಾರೆ.

ಬಲಹೀನ, ನೀಚ, ಶತ್ರುವರ್ಗಸ್ಥಿತ, ಪಾಪದೃಷ್ಟ, ದುಸ್ಥಾನದಲ್ಲಿರುವ ಗ್ರಹಗಳು ಅನಿಷ್ಟಫಲವನ್ನು ನೀಡುತ್ತವೆ. ಪಾಪಗ್ರಹಗಳ ದಶಾ ಅವಸಾನ ಕಾಲದಲ್ಲಿ ಸಾಮಾನ್ಯವಾಗಿ ಧನನಾಶ, ರೋಗ, ಭಯ, ಕಲಹ, ಇತ್ಯಾದಿ ಅಶುಭ ಫಲಗಳು ಸಂಭವಿಸುತ್ತವೆ.

ಕೇಂದ್ರ ಮತ್ತು ತ್ರಿಕೋಣದಲ್ಲಿರುವ ಗ್ರಹಗಳ ದಶೆಯು ಶುಭಫಲ ದಾಯಕ ಆಗಿರುತ್ತದೆ. ದ್ವಿತೀಯ, ತೃತೀಯ ಮತ್ತು ಏಕಾದಶ ಸ್ಥಿತಗ್ರಹರ ದಶೆಯು ಮಧ್ಯಮ ಫಲದಾಯಕ ಆಗಿರುತ್ತದೆ. ದುಸ್ಥಾನ ಸ್ಥಿತಗ್ರಹರ ದಶೆಯು ಅಶುಭಫಲದಾಯಕ ಆಗಿರುತ್ತದೆ.

ಜನನಕಾಲದ ದಶೆಯಿಂದ ಪ್ರಾರಂಭಿಸಿ ನಾಲ್ಕನೇ ದಶೆಯು ಶನಿದಶೆ ಆದರೆ (ಮೃಗಶಿರಾ, ಚಿತ್ರಾ ಮತ್ತು ಧನಿಷ್ಠಾ ನಕ್ಷತ್ರಗಳಲ್ಲಿ ಜನಿಸಿದವರಿಗೆ ನಾಲ್ಕನೇ ದಶೆಯು ಶನಿದಶೆ ಆಗಿರುತ್ತದೆ,) ಐದನೇ ದಶೆ ಕುಜದಶೆ ಅಥವಾ ರಾಹುದಶೆ ಆದರೆ (ಅಶ್ವಿನಿ, ಮಘಾ, ಮತ್ತು ಮೂಲಾ) ನಕ್ಷತ್ರಗಳಲ್ಲಿ ಜನಿಸಿದವರಿಗೆ ಐದನೇ ದಶೆಯು ಕುಜದಶೆ ಆಗಿರುತ್ತದೆ. ಭರಣಿ ಹುಬ್ಬಾ ಮತ್ತು ಪೂರ್ವಾಷಾಢಾ ನಕ್ಷತ್ರಗಳಲ್ಲಿ ಜನಿಸಿದವರಿಗೆ ಐದನೇ ದಶೆಯು ರಾಹುದಶೆ ಆಗಿರುತ್ತದೆ.) ಮತ್ತು ಆರನೇ ದಶೆಯು ಗುರುವಿನದ್ದು ಆದರೆ ಅಶುಭಫಲದಾಯಕ ಆಗಿರುತ್ತದೆ. (ಭರಣಿ, ಹುಬ್ಬಾ ಮತ್ತು ಪೂರ್ವಾಷಾಢಾ ನಕ್ಷತ್ರಗಳಲ್ಲಿ ಜನಿಸಿದವರಿಗೆ ಆರನೇ ದಶೆಯು ಗುರುವಿನ ದಶೆ ಆಗಿರುತ್ತದೆ.)

ದಶಾಕಾಲದಲ್ಲಿ ದಶಾನಾಥನ ಉಚ್ಚಕ್ಷೇತ್ರ, ಸ್ವಕ್ಷೇತ್ರಗಳಲ್ಲಿ ಗುರು, ಸೂರ್ಯರು ಗೋಚರದಲ್ಲಿ ಬಂದಾಗ ದಶಾಶುಭಫಲಗಳು ಸಂಭವಿಸುತ್ತವೆ. ದಶಾನಾಥನ ನೀಚ ಶತ್ರು ರಾಶಿಗಳಲ್ಲಿ ಗುರು ಸೂರ್ಯರು ಸಂಚರಿಸಿದಾಗ ದಶಾನಾಥನ ಅಶುಭಫಲಗಳು ಸಂಭವಿಸುತ್ತವೆ.

ಶೀರ್ಷೋದಯ ರಾಶಿಯಲ್ಲಿದ್ದ ಗ್ರಹನು ದಶಾಕಾಲದ ಆದಿತ್ರಿಭಾಗದಲ್ಲಿ ದಶಾಫಲವನ್ನು ನೀಡುತ್ತಾನೆ. ಪೃಷ್ಠೋದಯ ರಾಶಿಯಲ್ಲಿದ್ದ ಗ್ರಹನು ದಶೆಯ ಅಂತ್ಯ ತ್ರಿಭಾಗದಲ್ಲಿ ಫಲವನ್ನು ನೀಡುತ್ತಾನೆ. ಉಭಯೋದಯ ರಾಶಿಯಲ್ಲಿದ್ದ ಗ್ರಹನು ದಶಾಫಲವನ್ನು ಮಧ್ಯತ್ರಿಭಾಗದಲ್ಲಿ ನೀಡುತ್ತಾನೆ.

## ೫೦. ಗ್ರಹರ ಅಂತರ್ದಶೆ

ಪ್ರತೀ ಒಂದು ಗ್ರಹದಶೆಯಲ್ಲಿ ಒಂಭತ್ತು ಗ್ರಹರ ಅಂತರ್ದಶೆ ಅಥವಾ ಭುಕ್ತಿ ಇದೆ. ಮೊದಲನೇ ಅಂತರ್ದಶೆಯು ದಶಾನಾಥನದೇ ಆಗಿರುತ್ತದೆ. ಅನಂತರ ದಶಾಕ್ರಮದಂತೆ ಇತರ ಗ್ರಹರ ಅಂತರ್ದಶೆಯು ನಡೆಯುತ್ತದೆ. ಅಂತರ್ದಶೆಯನ್ನು ಶೋಧಿಸಲು ದಶಾನಾಥನ ವರ್ಷವನ್ನು ಭುಕ್ತಿನಾಥನ ವರ್ಷದಿಂದ ಗುಣಿಸಿ 120ರಿಂದ ಭಾಗಿಸಬೇಕು.

ಉದಾ: ಗುರುದಶೆಯಲ್ಲಿ ಶನಿಭುಕ್ತಿಯನ್ನು ಶೋಧಿಸಲು ಗುರುವಿನ ದಶಾವರ್ಷ 16 ಗುಣಿಸು ಶನಿದಶಾವರ್ಷ 19 ಅಂದರೆ 304; 120ರಿಂದ ಭಾಗಿಸಲು 2 ವರ್ಷ 6 ತಿಂಗಳು 12 ದಿನ ಬರುತ್ತದೆ. ಅಂದರೆ ಗುರುದಶೆಯಲ್ಲಿ ಶನಿಭುಕ್ತಿಯು 2 ವರ್ಷ 6 ತಿಂಗಳು 12 ದಿನ ಆಗುತ್ತದೆ. ಈ ಕೆಳಗಿನ ಕೋಷ್ಟಕದಲ್ಲಿ ಪ್ರತೀದಶೆಯ ಅಂತರ್ದಶೆಯನ್ನು ಬರೆದಿರುತ್ತದೆ.

# ದಶಾಂತರ್ದಶಾ ಕೋಷ್ಟಕ

| ದಶಾನಾಥ | ರವಿ ವ. ೬ | | ಚಂದ್ರ ವ. ೧೦ | | ಕುಜ ವ. ೭ | |
|---|---|---|---|---|---|---|
| ನಕ್ಷತ್ರ | ಕೃ. ಉ. ಉಷಾ | | ರೋ. ಹಸ್ತಾ ಶ್ರವಣಾ | | ಮೃ. ಚಿ. ಧ. | |
| ಭುಕ್ತಿನಾಥ | ವ.ತಿ.ದಿ. | ವ.ತಿ.ದಿ. | ವ.ತಿ.ದಿ. | ವ.ತಿ.ದಿ. | ವ.ತಿ.ದಿ. | ವ.ತಿ.ದಿ. |
| ರವಿ | 0 3 18 | 0 3 18 | — | — | — | — |
| ಚಂದ್ರ | 0 6 0 | 0 9 18 | 0 10 0 | 0 10 0 | — | — |
| ಕುಜ | 0 4 6 | 1 1 24 | 0 7 0 | 1 5 0 | 0 4 27 | 0 4 27 |
| ರಾಹು | 0 10 24 | 2 0 18 | 1 6 0 | 2 11 0 | 1 0 18 | 1 5 15 |
| ಗುರು | 0 9 18 | 2 10 6 | 1 4 0 | 4 3 0 | 0 11 6 | 2 4 21 |
| ಶನಿ | 0 11 12 | 3 9 18 | 1 7 0 | 5 10 0 | 1 1 9 | 3 6 0 |
| ಬುಧ | 0 10 6 | 4 7 24 | 1 5 0 | 7 3 0 | 0 11 27 | 4 5 27 |
| ಕೇತು | 0 4 6 | 5 0 0 | 0 7 0 | 7 10 0 | 0 4 27 | 4 10 24 |
| ಶುಕ್ರ | 1 0 0 | 6 0 0 | 1 8 0 | 9 6 0 | 1 2 0 | 6 0 24 |
| ರವಿ | — | — | 0 6 0 | 10 0 0 | 0 4 8 | 6 5 0 |
| ಚಂದ್ರ | — | — | — | — | 0 7 0 | 7 0 0 |

| ದಶಾನಾಥ | ರಾಹು ವ. ೧೮ | | ಗುರು ವ. ೧೬ | | ಶನಿ ವ. ೧೯ | |
|---|---|---|---|---|---|---|
| ನಕ್ಷತ್ರ | ಆರ್ದ್ರಾ, ಸ್ವಾತಿ, ಶತಭಿಷಾ | | ಪು. ವಿ. ಪೂಭಾ. | | ಪುಷ್ಯ. ಅ. ಉಭಾ. | |
| ಭುಕ್ತಿನಾಥ | ವ.ತಿ.ದಿ. | ವ.ತಿ.ದಿ. | ವ.ತಿ.ದಿ. | ವ.ತಿ.ದಿ. | ವ.ತಿ.ದಿ. | ವ.ತಿ.ದಿ. |
| ರಾಹು | 2 8 4 | 2 8 12 | — | — | — | — |
| ಗುರು | 2 4 24 | 5 1 6 | 2 1 18 | 2 1 18 | — | — |
| ಶನಿ | 2 10 6 | 7 11 12 | 2 6 12 | 4 8 0 | 3 0 3 | 3 0 3 |
| ಬುಧ | 2 6 18 | 10 6 0 | 2 3 6 | 6 11 6 | 2 8 9 | 5 8 12 |
| ಕೇತು | 1 0 18 | 11 6 18 | 0 11 6 | 7 10 12 | 1 1 9 | 6 9 21 |
| ಶುಕ್ರ | 3 0 0 | 14 6 18 | 2 8 0 | 10 6 12 | 3 2 0 | 9 11 21 |
| ರವಿ | 0 10 24 | 15 5 12 | 0 9 18 | 11 4 0 | 0 11 12 | 10 11 3 |
| ಚಂದ್ರ | 1 6 0 | 16 11 12 | 1 4 0 | 12 8 0 | 1 7 0 | 12 6 3 |
| ಕುಜ | 1 0 18 | 18 0 0 | 0 11 6 | 13 7 6 | 1 1 9 | 13 7 12 |
| ರಾಹು | — | — | 2 4 24 | 16 0 1 | 2 10 6 | 16 5 18 |
| ಗುರು | — | — | — | — | 2 6 12 | 19 0 0 |

| ದಶಾನಾಥ | ಬುಧ. ವ. ೧೭ | | ಕೇತು ವ. ೭ | | ಶುಕ್ರ ವ. ೨೦ | |
|---|---|---|---|---|---|---|
| ನಕ್ಷತ್ರ | ಅ. ಜ್ಯೇಷ್ಠಾ. ರೇವತಿ | | ಅಶ್ವಿನೀ ಮಘಾ. ಮೂಲ | | ಭರಣೀ ಹುಬ್ಬಾ. ಪೂ. ಆ. | |
| ಭುಕ್ತಿನಾಥ | ವ.ತಿ.ದಿ | ವ.ತಿ.ದಿ. | ವ.ತಿ.ದಿ. | ವ.ತಿ.ದಿ. | ವ.ತಿ.ದಿ. | ವ.ತಿ.ದಿ. |
| ಬುಧ | 2 4 27 | 2 4 27 | — | — | — | — |
| ಕೇತು | 0 11 27 | 3 4 24 | 0 4 27 | 0 4 27 | — | — |
| ಶುಕ್ರ | 2 10 0 | 6 2 24 | 1 2 0 | 1 6 27 | 3 4 0 | 3 4 0 |
| ರವಿ | 0 10 6 | 7 1 0 | 0 4 6 | 1 11 3 | 1 0 0 | 4 4 0 |
| ಚಂದ್ರ | 1 5 0 | 8 6 0 | 0 7 0 | 2 6 3 | 1 8 0 | 6 0 0 |
| ಕುಜ | 0 11 27 | 9 5 27 | 0 4 27 | 2 11 0 | 1 2 0 | 7 2 0 |
| ರಾಹು | 2 6 18 | 12 0 15 | 1 0 18 | 3 11 18 | 3 0 0 | 10 2 0 |
| ಗುರು | 2 3 6 | 14 3 21 | 0 11 6 | 4 10 24 | 2 8 0 | 12 10 0 |
| ಶನಿ | 2 8 9 | 17 0 0 | 1 1 9 | 6 0 3 | 3 2 0 | 16 0 0 |
| ಬುಧ | — | — | 0 11 27 | 7 0 0 | 2 10 0 | 18 10 0 |
| ಕೇತು | — | — | — | — | 1 2 0 | 20 0 0 |

ಭುಕ್ತಿನಾಥನು ದಶಾನಾಥನಿಂದ ದುಃಸ್ಥಾನದಲ್ಲಿ ಇದ್ದರೆ ಅವನ ಭುಕ್ತಿಫಲವು ಅಶುಭ ಆಗುತ್ತದೆ. ಅವನು ದಶಾನಾಥನಿಂದ ದ್ವಿತೀಯ, ತೃತೀಯ, ಚತುರ್ಥ, ಪಂಚಮ, ನವಮ, ದಶಮ ಮತ್ತು ಏಕಾದಶದಲ್ಲಿ ಇದ್ದರೆ ಶುಭಫಲವನ್ನು ಕೊಡುತ್ತಾನೆ. ದಶಾನಾಥನಿಂದ ಸಪ್ತಮದಲ್ಲಿ ಇದ್ದ ಗ್ರಹ ಮತ್ತು ದಶಾನಾಥನ ಯುತಿಯಲ್ಲಿದ್ದ ಗ್ರಹನ ಭುಕ್ತಿಯು ಶುಭಫಲದಾಯಕ ಆಗಿರುತ್ತದೆ.

ಬಲಿಷ್ಠ ಶುಭಗ್ರಹನ ದಶಾಕಾಲದಲ್ಲಿ ಶುಭಗ್ರಹನ ಭುಕ್ತಿಯಲ್ಲಿ ಸಕಲ ಐಶ್ವರ್ಯ, ಸುಖ-ಶಾಂತಿ, ಪತ್ನಿ, ಪುತ್ರ, ಮಿತ್ರ, ನೂತನ ವಸ್ತ್ರಾಭರಣ ಉತ್ತಮ ಆಹಾರ–ವಿಹಾರ, ಗಜ, ಅಶ್ವ, ವಾಹನ ಭೂಮಿ, ಅಧಿಕಾರ, ಮಾನ-ಸನ್ಮಾನ ರಾಜ-ಮರ್ಯಾದೆ, ಕೀರ್ತಿ ಇತ್ಯಾದಿ ಲಭಿಸುತ್ತವೆ. ಸತ್ಕರ್ಮ ದಿಂದ ಪ್ರಸಿದ್ಧಿ ಉಂಟಾಗುತ್ತದೆ.

ಪಾಪಗ್ರಹನ ದಶೆಯಲ್ಲಿ ಪಾಪಗ್ರಹರ ಭುಕ್ತಿಕಾಲ ಮತ್ತು ಜನ್ಮನಕ್ಷತ್ರ ದಿಂದ ವಿಪ್ಪತ್ತಾರೆ, ಪ್ರತ್ಯರತಾರೆ, ಮತ್ತು ವಧತಾರೆ ಇವುಗಳ ಅಧಿಪತಿಗಳ ಭುಕ್ತಿಕಾಲದಲ್ಲಿ ಅಶುಭಫಲ ಸಂಭವಿಸುತ್ತದೆ.

ಶುಕ್ರದಶಾ ಶನಿಭುಕ್ತಿ, ಶನಿದಶಾ ಶುಕ್ರಭುಕ್ತಿ ಮತ್ತು ಗುರುದಶಾ ಬುಧ ಭುಕ್ತಿಯಲ್ಲಿ ಸಾಮಾನ್ಯವಾಗಿ ಅಶುಭಫಲಗಳು ಸಂಭವಿಸುತ್ತದೆ.

## ೫೧. ಬಾಧಕಸ್ಥಾನ ಮತ್ತು ಫಲ

ಚರರಾಶಿಗೆ ಏಕಾದಶ, ಸ್ಥಿರರಾಶಿಗೆ ನವಮ ಮತ್ತು ಉಭಯರಾಶಿಗೆ ಸಪ್ತಮವು ಬಾಧಕಸ್ಥಾನ ಆಗಿರುತ್ತದೆ.

| ರಾಶಿ | ಬಾಧಾಸ್ಥಾನ | ರಾಶಿ | ಬಾಧಾಸ್ಥಾನ | ರಾಶಿ | ಬಾಧಾಸ್ಥಾನ |
|---|---|---|---|---|---|
| ಮೇಷ | ಕುಂಭ | ವೃಷಭ | ಮಕರ | ಮಿಥುನ | ಧನು |
| ಕರ್ಕಟಕ | ವೃಷಭ | ಸಿಂಹ | ಮೇಷ | ಕನ್ಯಾ | ಮೀನ |
| ತುಲಾ | ಸಿಂಹ | ವೃಶ್ಚಿಕ | ಕರ್ಕಟಕ | ಧನು | ಮಿಥುನ |
| ಮಕರ | ವೃಶ್ಚಿಕ | ಕುಂಭ | ತುಲಾ | ಮೀನ | ಕನ್ಯಾ |

ಚರರಾಶಿಯ ಬಾಧಾಸ್ಥಾನವಾದ, ಏಕಾದಶವು ಸ್ಥಿರರಾಶಿ ಆಗಿರುತ್ತದೆ. ಸ್ಥಿರರಾಶಿಯ ಬಾಧಾಸ್ಥಾನವಾದ ನವಮವು ಚರರಾಶಿ ಆಗಿರುತ್ತದೆ. ಉಭಯ ರಾಶಿಯ ಬಾಧಾಸ್ಥಾನವಾದ ಸಪ್ತಮವು ಉಭಯರಾಶಿ ಆಗಿರುತ್ತದೆ.

ಬಾಧಕಾಧಿಪತಿಯು ಅಷ್ಟಮದಲ್ಲಿ ಇರುವುದು, ಅಥವಾ ಅಷ್ಟಮಾಧಿ ಪತಿಯ ಸಂಬಂಧದಲ್ಲಿ ಇರುವುದು, ಖರ ದ್ರೇಕ್ಕಾಣಾಧಿಪತಿಯ (ಜನನ ದ್ರೇಕ್ಕಾಣದಿಂದ 22ನೇ ದ್ರೇಕ್ಕಾಣಾಧಿಪತಿ) ಯುತಿಯಲ್ಲಿ ಇರುವುದು ಮತ್ತು ಬಾಧಕಾಧಿಪತಿಗೆ ಮಾಂದಿಭವನಾಧಿಪತ್ಯ ಇದ್ದರೆ ಅವನ ದಶೆಯಲ್ಲಿ ರೋಗ ಶೋಕ, ಸಂಚಾರಾದಿ ಅಶುಭಫಲಗಳು ಸಂಭವಿಸುತ್ತವೆ.

## ೫೨. ಯೋಗಗಳು

'ಕರ್ಮಾರ್ಜಿತಂ ಪೂರ್ವಭವೇಸದಾದಿ' ಎಂಬ ವರಾಹಮಿಹಿರೋಕ್ತಿ ಯಂತೆ ಜಾತಕನಿಗೆ ಪೂರ್ವಕರ್ಮಾನುಸಾರವಾಗಿ ಧನ, ಸಂಪತ್ತು, ವಾಹನ, ಅಧಿಕಾರ, ಇತ್ಯಾದಿ ಶುಭಾಶುಭ ಫಲಗಳು ಲಭಿಸುತ್ತವೆ. ಇವುಗಳನ್ನು ಯೋಗ ಗಳು ಸೂಚಿಸುತ್ತವೆ. ಇಂತಹ ಯೋಗಗಳು ನೂರಾರು ಇವೆ. ಇವುಗಳಲ್ಲಿ ಮುಖ್ಯವಾದ ಕೆಲವು ಯೋಗಗಳನ್ನು ಇಲ್ಲಿ ಉಲ್ಲೇಖಿಸಿರುತ್ತದೆ.

ಯೋಗಗಳಲ್ಲಿ ಮುಖ್ಯವಾಗಿ 1) ನಾಭಸಯೋಗಗಳು 2) ಪ್ರವ್ರಜ್ಯಾ ಯೋಗಗಳು 3) ರಾಜಯೋಗಗಳು 4) ಚಾಂದ್ರಯೋಗಗಳು 5) ದ್ವಿಗ್ರಹಾದಿ ಯೋಗಗಳು 6) ಅರಿಷ್ಟಯೋಗಗಳು 7) ಪಂಚ ಮಹಾಪುರುಷಯೋಗ 8) ಸಂಕೀರ್ಣ ಅಥವಾ ವಿವಿಧ ಯೋಗಗಳು.

**1. ರುಚಕಯೋಗ :** ಕುಜನು ಮೇಷ, ವೃಶ್ಚಿಕ ಅಥವಾ ಮಕರ ರಾಶಿಯಲ್ಲಿದ್ದು, ಲಗ್ನ, ಚತುರ್ಥ, ಸಪ್ತಮ ಮತ್ತು ದಶಮಭಾವಗತನಾದರೆ ರುಚಕಯೋಗ ಆಗುತ್ತದೆ.

ರುಚಕಯೋಗದಲ್ಲಿ ಜನಿಸಿದವನು ಪರಾಕ್ರಮಿಯು, ಶತ್ರುಗಳನ್ನು ಜಯಿಸಿದವನು, ಬಲಿಷ್ಠನು, ಸ್ವವೀರ್ಯದಿಂದ ಧನಸಂಪಾದಿಸುವವನು, ಗರ್ವಿಷ್ಠನು, ಉತ್ತಮ ಗುಣ ಉಳ್ಳವನು, ಕೀರ್ತಿವಂತನು, ಕೈಕೊಂಡಕಾರ್ಯಗಳನ್ನು ಜಯಪ್ರದವಾಗಿ ಪೂರ್ತಿಮಾಡುವವನು ಆಗುತ್ತಾನೆ.

**2. ಭದ್ರಯೋಗ:** ಬುಧನು ಮಿಥುನ ಮತ್ತು ಕನ್ಯಾರಾಶಿಯಲ್ಲಿದ್ದು, ಲಗ್ನ, ಚತುರ್ಥ, ಸಪ್ತಮ ಮತ್ತು ದಶಮಭಾವಗತನಾದರೆ ಭದ್ರಯೋಗ ಆಗುತ್ತದೆ.

ಭದ್ರಯೋಗದಲ್ಲಿ ಜನಿಸಿದವನು ದೀರ್ಘಾಯುವು, ತೀಕ್ಷ್ಣ ಬುದ್ಧಿ ಉಳ್ಳವನು, ಚತುರನು, ಅಕಳಂಕನು, ವಿದ್ಯಾವಂತರಿಂದ ಪೂಜಿಸಲ್ಪಡುವವನು, ಅಧಿಕಾರಿಯು, ವೈಭವದಿಂದ ಕೂಡಿದವನು, ಸಭೆ, ಸಮಾರಂಭಗಳಲ್ಲಿ ಪ್ರಮುಖನು, ಐಶ್ವರ್ಯವಂತನು ಆಗುತ್ತಾನೆ.

**3. ಹಂಸಯೋಗ:** ಗುರುವು ಧನು, ಮೀನ ಮತ್ತು ಕರ್ಕಟಕ ರಾಶಿಯಲ್ಲಿ ಇದ್ದು ಲಗ್ನ ಚತುರ್ಥ, ಸಪ್ತಮ ಅಥವಾ ದಶಮಭಾವ ಗತನಾದರೆ ಹಂಸಯೋಗ ಆಗುತ್ತದೆ.

ಹಂಸಯೋಗದಲ್ಲಿ ಜನಿಸಿದವನು ಸತ್ಕರ್ಮನಿರತನು, ಭೂಪಾಲಿಕನು, ಲಕ್ಷಣವಂತನು, ಉತ್ತಮ ಸೌಕರ್ಯ ಉಳ್ಳವನು, ಮಾನವಂತನು ಆಗುತ್ತಾನೆ.

**4. ಮಾಲವ್ಯಯೋಗ :** ಶುಕ್ರನು ವೃಷಭ, ತುಲಾ ಮತ್ತು ಮೀನ ರಾಶಿಯಲ್ಲಿದ್ದು ಲಗ್ನ, ಚತುರ್ಥ, ಸಪ್ತಮ ಅಥವಾ ದಶಮಭಾವಗತನಾದರೆ ಮಾಲವ್ಯಯೋಗ ಆಗುತ್ತದೆ.

ಮಾಲವ್ಯಯೋಗದಲ್ಲಿ ಜನಿಸಿದವನು ಹೃಷ್ಟಪುಷ್ಟ ಅಂಗಾಂಗ ಉಳ್ಳವನು, ಸ್ಥಿರಮತಿಯು, ಧನಾಢ್ಯನು, ಸಪರಿವಾರದಿಂದ ಕೂಡಿದವನು, ಉತ್ತಮಭಾರ್ಯೆ ಉಳ್ಳವನು, ಪುತ್ರವಂತನು, ಭಾಗ್ಯವಂತನು, ಅಭಿವೃದ್ಧಿ ಉಳ್ಳವನು, ಸುಖ–ಸಂತೋಷದಿಂದ ಕೂಡಿದವನು, ವಿಲಾಸಿಯು, ವಾಹನ ಉಳ್ಳವನು, ಪ್ರಸಿದ್ಧಿ ಹೊಂದಿದವನು, ವಿದ್ಯಾವಂತನು, ಪ್ರಸನ್ನಚಿತ್ತನು ಆಗುತ್ತಾನೆ.

5. **ಶಶಯೋಗ:** ಶನಿಯು, ಮಕರ, ಕುಂಭ, ತುಲಾರಾಶಿಯಲ್ಲಿದ್ದು ಲಗ್ನ, ಚತುರ್ಥ, ಸಪ್ತಮ ಅಥವಾ ದಶಮಭಾವಗತನಾದರೆ ಶಶಯೋಗ ಆಗುತ್ತದೆ.

ಶಶಯೋಗದಲ್ಲಿ ಜನಿಸಿದವನು ಸರ್ವರಿಂದ ಹೊಗಳಲ್ಪಡುವವನು ಉತ್ತಮ ಸೇವಕರು ಉಳ್ಳವನು, ಬಲಿಷ್ಠನು, ನಗರಸಭಾಪತಿ, ಅಥವಾ ಭೂಪತಿ, ಕುಹಕತನ ಉಳ್ಳವನು, ಪರಸ್ತ್ರೀಯರನ್ನು ಬಯಸುವವನು, ಧನಸಂಪತ್ತಿನ ಅಪೇಕ್ಷೆ ಉಳ್ಳವನು, ಸುಖಿವಂತನು ಆಗುತ್ತಾನೆ.

ಮೇಲೆ ಉಲ್ಲೇಖಿಸಿದ ರುಚಕಾದಿ ಐದು ಯೋಗಗಳನ್ನು ಪಂಚಮಹಾ ಪುರುಷ ಯೋಗಗಳು ಎಂದು ಕರೆಯುತ್ತಾರೆ.

ಮೇಲೆ ಉಲ್ಲೇಖಿಸಿದ ತಾರಾಗ್ರಹರು ಸ್ವಕ್ಷೇತ್ರ ಅಥವಾ ಉಚ್ಚರಾಗಿ ಚಂದ್ರನಿಂದ ಕೇಂದ್ರಗತರು ಆದಾಗ ಶುಭಫಲವನ್ನು ನೀಡುತ್ತಾರೆ.

6. **ಮಹಾ ಭಾಗ್ಯಯೋಗ:** ದಿವಾ ಜನನದಲ್ಲಿ ಪುರುಷರಿಗೆ ಲಗ್ನ, ಚಂದ್ರ ಮತ್ತು ಸೂರ್ಯನು ವಿಷಮರಾಶಿಯಲ್ಲಿ ಇರಬೇಕು. ಸ್ತ್ರೀಯರಿಗೆ ರಾತ್ರಿ ಜನನ ಆಗಿ ಲಗ್ನ, ಚಂದ್ರ ಮತ್ತು ಸೂರ್ಯನು ಸಮರಾಶಿಯಲ್ಲಿ ಇರಬೇಕು. ಇದನ್ನು ಮಹಾ ಭಾಗ್ಯಯೋಗ ಎಂದು ಕರೆಯುತ್ತಾರೆ.

ಮಹಾ ಭಾಗ್ಯಯೋಗದಲ್ಲಿ ಜನಿಸಿದ ಪುರುಷನು ಸಕಲ ಭೋಗವಂತನು, ಉದಾರನು, ಪ್ರಖ್ಯಾತನು, ಭೂಪತಿಯು, ದೀರ್ಘಾಯುಷ್ಯ ಉಳ್ಳವನು, ಗುಣವಂತನು, ಆಗುತ್ತಾನೆ. ಈ ಯೋಗದಲ್ಲಿ ಜನಿಸಿದ ಸ್ತ್ರೀಯು ಧನ ಸಂಪತ್ತು ಉಳ್ಳವಳು, ದೀರ್ಘಾಯುವಾದ ಪತಿ ಮತ್ತು ಪುತ್ರರು ಉಳ್ಳವಳು, ಭಾಗ್ಯವಂತಳು, ಗುಣವಂತಳು ಆಗುತ್ತಾಳೆ.

7. **ವಸುಮತೀಯೋಗ:** ಲಗ್ನ ಅಥವಾ ಚಂದ್ರನಿಂದ ಉಪಚಯ ಸ್ಥಾನದಲ್ಲಿ (3, 6, 10 ಮತ್ತು 11) ಎಲ್ಲ ಶುಭಗ್ರಹರು (ಬುಧ, ಗುರು, ಶುಕ್ರ) ಇದ್ದರೆ ವಸುಮತೀಯೋಗ ಆಗುತ್ತದೆ.

ವಸುಮತಿ ಯೋಗದಲ್ಲಿ ಜನಿಸಿದವನು ಧನಾಢ್ಯನು, ಭೂಸಂಪತ್ತು ಉಳ್ಳವನು, ಉತ್ತಮ ಗೃಹ ಉಳ್ಳವನು ಆಗುತ್ತಾನೆ.

8. ಅಧಿಯೋಗ: ಗುರು, ಬುಧ ಮತ್ತು ಶುಕ್ರನು ಚಂದ್ರನಿಂದ ಷಷ್ಠ, ಸಪ್ತಮ ಮತ್ತು ಅಷ್ಟಮದಲ್ಲಿ ಇದ್ದರೆ ಅಧಿಯೋಗ ಆಗುತ್ತದೆ.

ಅಧಿಯೋಗದಲ್ಲಿ ಜನಿಸಿದವನು ಖ್ಯಾತವಂತನು, ಅಭಿವೃದ್ಧಿ ಉಳ್ಳವನು, ಐಶ್ವರ್ಯವಂತನು, ದೀರ್ಘಾಯುಷ್ಯ ಉಳ್ಳವನು, ಸೇನಾಧಿಪತಿ, ಮಂತ್ರಿ ಅಥವಾ ರಾಜನು ಆಗುತ್ತಾನೆ.

9. ಗಜಕೇಸರಿಯೋಗ : ಗುರುವು ಚಂದ್ರ ಕೇಂದ್ರಗತನಾದರೆ ಗಜಕೇಸರಿಯೋಗ ಆಗುತ್ತದೆ. ಗಜಕೇಸರಿಯೋಗದಲ್ಲಿ ಹುಟ್ಟಿದವನು ವೀರ್ಯವಂತನು, ಧನಾಢ್ಯನು, ತೇಜಸ್ವಿಯು, ಮೇಧಾವಿಯು, ಗುಣವಂತನು, ರಾಜಪ್ರಿಯನು, ಗ್ರಾಮ, ನಗರ ಸಭಾಧಿಪತಿ ಆಗುತ್ತಾನೆ.

10. ರಜ್ಜುಯೋಗ : ಎಲ್ಲಾ ಗ್ರಹರು ಚರರಾಶಿಯಲ್ಲಿ [ಮೇಷ, ಕರ್ಕಟಕ, ತುಲಾ ಮತ್ತು ಮಕರರಾಶಿ] ಇದ್ದರೆ ರಜ್ಜುಯೋಗ ಆಗುತ್ತದೆ.

ರಜ್ಜುಯೋಗದಲ್ಲಿ ಜನಿಸಿದವನು ಮತ್ಸರ ಉಳ್ಳವನು, ವಿದೇಶದಲ್ಲಿ ಇರುವವನು, ಸಂಚಾರ ಪ್ರಿಯನು, ಧನ, ಕೀರ್ತಿ ಇತ್ಯಾದಿಗಳಲ್ಲಿ ಅಭಿಲಾಷೆ ಉಳ್ಳವನು ಆಗುತ್ತಾನೆ.

11. ಮುಸಲಯೋಗ: ಎಲ್ಲಾ ಗ್ರಹರು ಸ್ಥಿರರಾಶಿಯಲ್ಲಿ [ವೃಷಭ, ಸಿಂಹ, ವೃಶ್ಚಿಕ ಮತ್ತು ಕುಂಭರಾಶಿ] ಇದ್ದರೆ ಮುಸಲಯೋಗ ಆಗುತ್ತದೆ.

ಮುಸಲಯೋಗದಲ್ಲಿ ಜನಿಸಿದವನು, ಮಾನವಂತನು ಧನಾಢ್ಯನು, ಅನೇಕ ಕಾರ್ಯಗಳನ್ನು ಮಾಡುವವನು ಸ್ಥಿರವಾದ ಬುದ್ಧಿ ಉಳ್ಳವನು ಆಗುತ್ತಾನೆ.

12. ನಲಯೋಗ: ಎಲ್ಲಾ ಗ್ರಹರು ಉಭಯರಾಶಿಯಲ್ಲಿ [ಮಿಥುನ, ಕನ್ಯಾ, ಧನು ಮತ್ತು ಮೀನರಾಶಿ] ಇದ್ದರೆ ನಲಯೋಗ ಆಗುತ್ತದೆ.

ನಲಯೋಗದಲ್ಲಿ ಹುಟ್ಟಿದವನು, ಅಂಗಹೀನನು, ಧನಾಢ್ಯನು, ನಿಪುಣನು ಧೂರ್ತನು ಆಗುತ್ತಾನೆ,

13. ಸ್ರಕ್ (ಮಾಲಾ) ಯೋಗ: ಸಕಲ ಶುಭಗ್ರಹರು ಕೇಂದ್ರಗತನಾದರೆ ಸ್ರಕ್ ಅಥವಾ ಮಾಲಾಯೋಗ ಆಗುತ್ತದೆ.

ಮಾಲಾಯೋಗದಲ್ಲಿ ಜನಿಸಿದವನು ಸುಖವಂತನು, ಭೋಗವಂತನು ಆಗುತ್ತಾನೆ.

**14. ಸರ್ಪಯೋಗ :** ಸಕಲ ಪಾಪಗ್ರಹರು ಕೇಂದ್ರಗತರಾದರೆ ಸರ್ಪಯೋಗ ಆಗುತ್ತದೆ.

ಸರ್ಪಯೋಗದಲ್ಲಿ ಜನಿಸಿದವನು ದುಃಖ ಮತ್ತು ಕಷ್ಟಗಳನ್ನು ಅನುಭವಿಸುತ್ತಾನೆ.

**15. ಶೃಂಗಾಟಿಕಯೋಗ :** ಸಕಲಗ್ರಹರು ಲಗ್ನ, ಪಂಚಮ, ಮತ್ತು ನವಮಭಾವದಲ್ಲಿ ಇದ್ದರೆ ಶೃಂಗಾಟಕಯೋಗ ಆಗುತ್ತದೆ.

ಶೃಂಗಾಟಿಕಯೋಗದಲ್ಲಿ ಜನಿಸಿದವನು ಸೌಮ್ಯಸ್ವಭಾವದವನು ಮತ್ತು ಜೀವಿತದ ಉತ್ತರಾರ್ಧದಲ್ಲಿ ಸುಖಿವಂತನು ಆಗುತ್ತಾನೆ.

**16. ಸಮುದ್ರಯೋಗ :** ಸಕಲ ಗ್ರಹರು ದ್ವಿತೀಯದಿಂದ ಪ್ರಾರಂಭಿಸಿ, ಒಂದು ಬಿಟ್ಟು ಒಂದು ರಾಶಿಯಲ್ಲಿ ಇದ್ದರೆ (2, 4, 6, 8,) 10 ಮತ್ತು 12) ಸಮುದ್ರಯೋಗ ಆಗುತ್ತದೆ.

ಸಮುದ್ರಯೋಗದಲ್ಲಿ ಜನಿಸಿದವನು ಜಲವಸ್ತು ಅಥವಾ ಜಲೋತ್ಪನ್ನ ವಸ್ತುಗಳಿಂದ ಧನಾರ್ಜನೆ ಮಾಡುವವನು, ಧನವಂತನು ಮತ್ತು ಭೂಪತಿಯು ಆಗುತ್ತಾನೆ.

**17. ಚಕ್ರಯೋಗ:** ಸಕಲ ಗ್ರಹರು ಲಗ್ನದಿಂದ ಪ್ರಾರಂಭಿಸಿ ಒಂದು ಬಿಟ್ಟು ಒಂದು ರಾಶಿಯಲ್ಲಿ ಇದ್ದರೆ (1, 3, 5, 7, 9, 11) ಚಕ್ರಯೋಗ ಆಗುತ್ತದೆ.

ಚಕ್ರಯೋಗದಲ್ಲಿ ಜನಿಸಿದವನು ಯಶಸ್ಸು ಉಳ್ಳವನು, ರಾಜನು, ಸುಖವಂತನು ಆಗುತ್ತಾನೆ.

**18. ವೀಣಾಯೋಗ :** ಸಪ್ತಗ್ರಹರು ಏಳು ರಾಶಿಯಲ್ಲಿ ಇದ್ದರೆ ವೀಣಾಯೋಗ ಆಗುತ್ತದೆ.

ವೀಣಾಯೋಗದಲ್ಲಿ ಜನಿಸಿದವನು ಸಕಲ ಕಾರ್ಯಗಳಲ್ಲಿ ನುರಿತವನು, ಸಂಗೀತ, ನೃತ್ಯ ಇತ್ಯಾದಿಗಳಲ್ಲಿ ಪ್ರೀತಿ ಉಳ್ಳವನು ಆಗುತ್ತಾನೆ.

**19. ದಾಮಯೋಗ :** ಸಪ್ತಗ್ರಹರು ಆರುರಾಶಿಯಲ್ಲಿ ಇದ್ದರೆ ದಾಮಯೋಗ ಆಗುತ್ತದೆ. ದಾಮಯೋಗದಲ್ಲಿ ಜನಿಸಿದವನು ಉಪಕಾರ ಸ್ಮರಣೆ ಉಳ್ಳವನು, ತೀಕ್ಷ್ಣವಾದ ಬುದ್ಧಿ ಉಳ್ಳವನು, ಧನವಂತನು ಆಗುತ್ತಾನೆ.

**20. ಸುನಫಾಯೋಗ :** ಚಂದ್ರನ ದ್ವಿತೀಯದಲ್ಲಿ ರವಿ ವಿರಹಿತ [ಕುಜಾದಿ ಐದು ತಾರಾಗ್ರಹರು] ಗ್ರಹರು ಇದ್ದರೆ ಸುನಫಾಯೋಗ ಆಗುತ್ತದೆ.

ಸುನಫಾಯೋಗದಲ್ಲಿ ಜನಿಸಿದವನು ಸ್ವಪ್ರಯತ್ನದಿಂದ ಧನ ಮತ್ತು ಸಂಪತ್ತನ್ನು ಗಳಿಸುತ್ತಾನೆ. ಭೂಮಾಲಿಕ ಅಥವಾ ರಾಜತುಲ್ಯನು, ಬುದ್ಧಿವಂತನು, ಧನವಂತನು ಮತ್ತು ಕೀರ್ತಿವಂತನು ಆಗುತ್ತಾನೆ.

**21. ಅನಫಾಯೋಗ :** ಚಂದ್ರನ ದ್ವಾದಶದಲ್ಲಿ ಕುಜಾದಿ ತಾರಾ ಗ್ರಹರು ಇದ್ದರೆ ಅನಫಾಯೋಗ ಆಗುತ್ತದೆ.

ಅನಫಾಯೋಗದಲ್ಲಿ ಜನಿಸಿದವನು ದೃಢಕಾಯನು. ಆರೋಗ್ಯವಂತನು, ಗುಣವಂತನು, ಪ್ರಖ್ಯಾತನು, ಕೀರ್ತಿವಂತನು, ಸುಖ–ಸಂಪತ್ತುಗಳಿಂದ ಕೂಡಿದವನು ಆಗುತ್ತಾನೆ.

**22. ದುರಧರಾಯೋಗ :** ಚಂದ್ರನ ದ್ವಿತೀಯ ಮತ್ತು ದ್ವಾದಶದಲ್ಲಿ ಕುಜಾದಿ ತಾರಾ ಗ್ರಹರು ಇದ್ದರೆ ದುರಧರಾಯೋಗ ಆಗುತ್ತದೆ.

ದುರಧರಾಯೋಗದಲ್ಲಿ ಜನಿಸಿದವನು ಧನ, ಸಂಪತ್ತು. ಸುಖ. ವಾಹನ ಇತ್ಯಾದಿಗಳಿಂದ ಕೂಡಿದವನು, ಉದಾರವಂತನು. ಉತ್ತಮ ಸೇವಕರು ಉಳ್ಳವನು ಆಗುತ್ತಾನೆ.

ತಾರಾಗ್ರಹರು ರವಿಯಿಂದ ದ್ವಿತೀಯ, ದ್ವಾದಶ ಮತ್ತು ಉಭಯ ಪಾರ್ಶ್ವದಲ್ಲಿ ಇದ್ದರೆ ಕ್ರಮವಾಗಿ ವೇಸಿ, ವಾಸಿ ಮತ್ತು ಉಭಯ ಚರಿಯೋಗ ಆಗುತ್ತದೆ. ಶುಭಗ್ರಹರಿಂದ ಶುಭವೇಶಿ ಇತ್ಯಾದಿ ಪಾಪಗ್ರಹರಿಂದ ಅಶುಭ ವೇಶಿ ಇತ್ಯಾದಿಯೋಗ ಆಗುತ್ತದೆ.

**23. ಕೇಮದ್ರುಮಯೋಗ:** ಚಂದ್ರನ ದ್ವಿತೀಯ ಮತ್ತು ದ್ವಾದಶದಲ್ಲಿ ಯಾವ ಗ್ರಹವು ಇಲ್ಲದಿದ್ದರೆ ಕೇಮದ್ರುಮಯೋಗ ಆಗುತ್ತದೆ.

ಕೇಮದ್ರುಮ ಯೋಗದಲ್ಲಿ ಜನಿಸಿದವನು ದುಃಖಿತನು, ಮಲಿನನು, ನೀಚಸ್ವಭಾವ ಉಳ್ಳವನು, ಧನವನ್ನು ಕಳೆಕೊಂಡವನು, ಸೇವಕನು ಆಗುತ್ತಾನೆ. ಈ ಯೋಗದಲ್ಲಿ ಜನಿಸಿದವನು ಐಶ್ವರ್ಯವಂತನಾದರೂ ನಿರ್ಗತಿಕನು ಆಗುತ್ತಾನೆ.

ಕೇಂದ್ರಗಳಲ್ಲಿ ಗ್ರಹರಿದ್ದರೆ ಅಥವಾ ಚಂದ್ರನು ಗ್ರಹರೊಂದಿಗೆ ಇದ್ದರೆ ಕೇಮದ್ರುಮಯೋಗ ಭಂಗ ಆಗುತ್ತದೆ. ಮೇಲಿನ ಸುನಫಾದಿಯೋಗಗಳಲ್ಲಿ ರವಿಸ್ಥಿತಿಯಿಂದ ಯೋಗ ಅಥವಾ ಯೋಗಭಂಗ ಸಂಭವಿಸುವುದಿಲ್ಲ.

**24.** ರಾಜಯೋಗ : ಐದು ಗ್ರಹರು ಉಚ್ಚ ಅಥವಾ ಸ್ವಕ್ಷೇತ್ರಗತರಾಗಿ, ತ್ರಿಕೋಣಗತರಾದರೆ ಜಾತಕನು ರಾಜನಾಗುತ್ತಾನೆ. ಐದಕ್ಕಿಂತ ಕಡಿಮೆ ಗ್ರಹರಾದರೆ ಧನಿಕನು, ರಾಜತುಲ್ಯನು ಆಗುತ್ತಾನೆ.

**25.** ಸಂನ್ಯಾಸಯೋಗ: 1) ಗುರುವು ನವಮಭಾವಗತನಾದಾಗ ಲಗ್ನ, ಚಂದ್ರ ಮತ್ತು ಗುರುವನ್ನು ಶನಿಯು ನೋಡಿದರೆ ರಾಜಯೋಗದಲ್ಲಿ ಜನಿಸಿದವನಾದರೂ ಧಾರ್ಮಿಕನಿಷ್ಠ ಉಳ್ಳವನು ತತ್ವಜ್ಞಾನಿಯು ಆಗುತ್ತಾನೆ. 2) ನವಮದಲ್ಲಿ ಶನಿಯಿದ್ದು ಆ ಶನಿಯು ಯಾವ ಗ್ರಹನಿಂದ ನೋಡಲ್ಪಡದಿದ್ದರೆ ಸಂನ್ಯಾಸವನ್ನು ಹೊಂದುವನು.

## ೫೩. ಗ್ರಹಚಾರ ಫಲ

ಗೋಚರದ ಫಲಾಫಲಗಳನ್ನು ಜನ್ಮರಾಶಿಯಿಂದ (ಅಂದರೆ ಜನನಕಾಲದ ಚಂದ್ರಸ್ಥಿತರಾಶಿಯಿಂದ) ಪ್ರಾರಂಭಿಸಿ ಭಾವಗಳಲ್ಲಿ ಗ್ರಹರ ಚಾರಫಲವನ್ನು ತಿಳಿಯಬೇಕು.

ಸೂರ್ಯ : ಸೂರ್ಯನು ಜನ್ಮರಾಶಿಯಲ್ಲಿ ಗೋಚರಿಸುವಾಗ ನಷ್ಟ, ಖರ್ಚು, ಆಯಾಸ, ಕಷ್ಟಕರ ಪ್ರಯಾಣ, ರೋಗ ಇತ್ಯಾದಿ ಸಂಭವಿಸುತ್ತದೆ. ಚಂದ್ರನಿಂದ ದ್ವಿತೀಯದಲ್ಲಿ ಸಂಚರಿಸುವಾಗ ಧನನಷ್ಟ, ಅಸುಖ, ಮೋಸ, ಕಣ್ಣುನೋವು ಸಂಭವಿಸುತ್ತದೆ. ತೃತೀಯದಲ್ಲಿ ಸ್ಥಾನಪ್ರಾಪ್ತಿ, ಧನಲಾಭ, ಸುಖ, ಸಂತೋಷ, ರೋಗವಿಮುಕ್ತತೆ, ಶತ್ರುನಾಶ ಇತ್ಯಾದಿ ಸಂಭವಿಸುತ್ತದೆ. ಚತುರ್ಥದಲ್ಲಿ ಅನಾರೋಗ್ಯ ಮತ್ತು ಕೈಕೊಂಡಕಾರ್ಯಗಳಲ್ಲಿ ವಿಘ್ನಗಳು ಸಂಭವಿಸುತ್ತದೆ. ಪಂಚಮದಲ್ಲಿ ಶಾರೀರಿಕಪೀಡೆ ಮತ್ತು ವೈರಿಗಳಿಂದ ಸಂಕಷ್ಟಗಳು ಉಂಟಾಗುತ್ತವೆ. ಷಷ್ಠದಲ್ಲಿ ರೋಗವಿಮುಕ್ತಿ, ಶತ್ರುನಾಶ ಮತ್ತು ದುಃಖನಾಶ ಸಂಭವಿಸುತ್ತದೆ. ಸಪ್ತಮದಲ್ಲಿ ಆಯಾಸಕರ ಪ್ರಯಾಣ, ಉದರ ವ್ಯಾಧಿ, ಇತ್ಯಾದಿಗಳು ಉಂಟಾಗುತ್ತವೆ. ಅಷ್ಟಮದಲ್ಲಿ ರೋಗ, ಭಯ,

ಪತ್ನಿಯೊಂದಿಗೆ ಕಲಹ ಉಂಟಾಗುತ್ತವೆ. ನವಮದಲ್ಲಿ ಅಪಾಯ, ವ್ಯಾಧಿ, ಮಾನನಷ್ಟ, ಕೈಕೊಂಡಕಾರ್ಯಗಳಲ್ಲಿ ವಿಘ್ನ, ಅಪವಾದ ಮತ್ತು ನಷ್ಟ ಸಂಭವಿಸುತ್ತದೆ. ದಶಮದಲ್ಲಿ ಯಶಸ್ಸು, ಕೈಕೊಂಡ ಕಾರ್ಯಗಳಲ್ಲಿ ಜಯ ಲಭಿಸುತ್ತದೆ. ಏಕಾದಶದಲ್ಲಿ ಲಾಭ, ಕೀರ್ತಿ, ಧನಲಾಭ, ರೋಗನಿವಾರಣೆ ಆಗುತ್ತದೆ ದ್ವಾದಶದಲ್ಲಿ ಸೂರ್ಯನು ಗೋಚರಿಸುವಾಗ ನ್ಯಾಯಮಾರ್ಗದಲ್ಲಿ ನಡೆಯುವವರಿಗೆ ಸಫಲತೆಯನ್ನು ಅನ್ಯಥಾ ಹಾನಿಯನ್ನು ಅನುಭವಿಸುತ್ತಾರೆ.

ಚಂದ್ರ : ಚಂದ್ರನು ಜನ್ಮರಾಶಿಯಲ್ಲಿ ಗೋಚರಿಸುವಾಗ ವಸ್ತ್ರ, ಭೋಜನ, ಶಯನಾದಿಗಳನ್ನು ನೀಡುತ್ತಾನೆ. ದ್ವಿತೀಯದಲ್ಲಿ ಮಾನಹಾನಿ, ಧನನಾಶ, ದುಃಖ ವಿಘ್ನಾದಿಗಳನ್ನು ನೀಡುತ್ತಾನೆ. ತೃತೀಯದಲ್ಲಿ ವಸ್ತ್ರಾಭರಣ, ಧನ, ಸ್ತ್ರೀ ವಿಜಯ, ಸೌಖ್ಯ ಇತ್ಯಾದಿಗಳನ್ನು ನೀಡುತ್ತಾನೆ. ಚತುರ್ಥದಲ್ಲಿ ಅವಿಶ್ವಾಸ, ಭಯ ಇತ್ಯಾದಿಗಳು ಸಂಭವಿಸುತ್ತವೆ. ಪಂಚಮದಲ್ಲಿ ವ್ಯಾಧಿ, ಕೈಕೊಂಡ ಕಾರ್ಯ ಮತ್ತು ಪ್ರಯಾಣದಲ್ಲಿ ವಿಘ್ನ, ದೀನತೆ ಮತ್ತು ದುಃಖ ಇತ್ಯಾದಿಗಳನ್ನು ನೀಡುತ್ತಾನೆ. ಷಷ್ಠದಲ್ಲಿ ವಿತ್ತಲಾಭ, ಸುಖ, ಸಂತೋಷ, ರೋಗಕ್ಷಯ ಮತ್ತು ಶತ್ರುನಾಶ ಆಗುತ್ತದೆ. ಸಪ್ತಮದಲ್ಲಿ ವಾಹನ, ಸುಖ ಸಂತೋಷ, ಮಾನ, ಶಯನ, ಭೋಜನ ಧನಲಾಭ ಇತ್ಯಾದಿ ಪಡೆಯುತ್ತಾನೆ. ಅಷ್ಟಮದಲ್ಲಿ ಭಯ, ಹೆದರಿಕೆ ಮತ್ತು ಆಕಸ್ಮಿಕ ಘಟನೆಗಳು ಸಂಭವಿಸುತ್ತದೆ. ನವಮದಲ್ಲಿ ಬಂಧನ, ಅನಾರೋಗ್ಯ ಉದ್ವೇಗ, ಆಯಾಸ, ಉದರರೋಗಗಳು ಉಂಟಾಗುತ್ತವೆ. ದಶಮದಲ್ಲಿ ಕರ್ಮಸಿದ್ಧಿ, ಪ್ರಖ್ಯಾತಿ, ಸ್ಥಾನಲಾಭ, ಇಷ್ಟಸಿದ್ಧಿ ಉಂಟಾಗುತ್ತದೆ. ಏಕಾದಶದಲ್ಲಿ ಅಭಿವೃದ್ಧಿ ಸಂತೋಷ, ಮಿತ್ರಾಗಮನ, ಲಾಭ ಉಂಟಾಗುತ್ತದೆ. ವ್ಯಯದಲ್ಲಿ ಅನಾವಶ್ಯಕ ಖರ್ಚು ಮತ್ತು ಕಲಹ ಸಂಭವಿಸುತ್ತದೆ.

ಕುಜ : ಕುಜನು ಜನ್ಮರಾಶಿಯಲ್ಲಿ ಸಂಚರಿಸುವಾಗ ಅಪಘಾತಗಳು, ದ್ವಿತೀಯದಲ್ಲಿ ಶತ್ರುಪೀಡೆ ರಾಜಭಯ, ಕಲಹ, ಪಿತ್ತಪ್ರಕೋಪ, ಬೆಂಕಿಯ ಅಪಘಾತ, ಕಳ್ಳಕಾಕರಿಂದ ನಷ್ಟ, ವ್ಯಾಧಿಗಳು ಸಂಭವಿಸುತ್ತದೆ. ತೃತೀಯದಲ್ಲಿ ಕಳ್ಳತನದಿಂದ, ಲಂಚದಿಂದ, ಅನ್ಯಾಯದಿಂದ ಲಾಭ, ಅಧಿಕಾರ, ಧನ, ಶಕ್ತಿ, ಭೂಸಂಪತ್ತು ವಸ್ತ್ರ ಇತ್ಯಾದಿ ಲಭಿಸುತ್ತವೆ. ಚತುರ್ಥದಲ್ಲಿ ಜ್ವರ, ಜಠರ ವ್ಯಾಧಿ, ರಕ್ತಸ್ರಾವ ಅಥವಾ ರಕ್ತದೋಷ, ದುರ್ಜನರ ಸಹವಾಸದಿಂದ ಅಶುಭ

ಫಲಗಳು ಸಂಭವಿಸುತ್ತವೆ. ಪಂಚಮದಲ್ಲಿ ಶತ್ರುತ್ವ, ಅಸ್ವಸ್ಥತೆ, ಕೋಪ, ಭಯ, ಮಕ್ಕಳಿಂದ ಶೋಕ, ಬಲನಾಶ, ಇತ್ಯಾದಿಗಳು ಸಂಭವಿಸುತ್ತದೆ. ಷಷ್ಠದಲ್ಲಿ ಭಯ, ಮತ್ತು ಕಲಹ, ಶತ್ರುನಾಶ, ಸುವರ್ಣಮತ್ತು ತಾಮ್ರಲಾಭ, ವಿಷಯಾಸಕ್ತಿ, ಸ್ಥಾನ ಮತ್ತು ಮಾನ ಲಭಿಸುತ್ತದೆ. ಸಪ್ತಮದಲ್ಲಿ ಪತ್ನಿಯೊಂದಿಗೆ ಕಲಹ ಕಣ್ಣುನೋವು ಜಠರವ್ಯಾಧಿಗಳು, ಬೇಧಾಭಿಪ್ರಾಯಗಳು ಉಂಟಾಗುತ್ತವೆ. ಅಷ್ಟಮದಲ್ಲಿ ಯಂತ್ರ ಆಯುಧಗಳಿಂದ ಅಪಘಾತ, ರಕ್ತಸ್ರಾವ, ಮಾನಹಾನಿ ಮತ್ತು ಧನಕ್ಷಯ ಉಂಟಾಗುತ್ತವೆ. ನವಮದಲ್ಲಿ ಪರಾಭವ, ಧನನಾಶ, ಧಾತುಕ್ಷಯ, ನಿರ್ಬಲತೆ ಮತ್ತು ಶರೀರಪೀಡೆ ಉಂಟಾಗುತ್ತದೆ. ದಶಮದಲ್ಲಿ ಕೈಕೊಂಡ ಕಾರ್ಯಗಳಲ್ಲಿ ಯಶಸ್ಸು ಲಭಿಸುತ್ತದೆ. ಏಕಾದಶದಲ್ಲಿ ಅನೇಕ ವಿಧದಲ್ಲಿ ಧನಾಗಮನ, ಯಶ, ಅಧಿಕಾರ, ಲಾಭ ಇತ್ಯಾದಿ ಉಂಟಾಗುತ್ತದೆ. ವ್ಯಯದಲ್ಲಿ ನಾನಾರೀತಿಯ ಖರ್ಚುಗಳು, ಸಂತಾಪ ಅನರ್ಥ ಸ್ತ್ರೀಯರೊಂದಿಗೆ ಜಗಳ, ಪಿತ್ತಭಾಧೆ, ಕಣ್ಣು ನೋವು ಸಂಭವಿಸುತ್ತದೆ.

ಬುಧ : ಬುಧನು ಜನ್ಮ ರಾಶಿಯಲ್ಲಿ ಸಂಚರಿಸುವಾಗ ದುಷ್ಟರಿಂದ ಧನ ಹಾನಿ, ಶತ್ರುಬಾಧೆ, ಬಂಧನ, ಕಲಹ, ಪ್ರಯಾಣ ಅಹಿತ ವಚನಗಳನ್ನು ಕೇಳು ವನು. ದ್ವಿತೀಯದಲ್ಲಿ ಪರಾಭವ, ಧನಲಾಭ ಉಂಟಾಗುತ್ತದೆ. ತೃತೀಯ ದಲ್ಲಿ ಮಿತ್ರಲಾಭ, ರಾಜಭಯ, ಶತ್ರುಬಾಧೆ, ಸಂಶಯಚಿತ್ತ, ಅಪ್ರಾಮಾಣಿಕ ಕಾರ್ಯಗಳಿಂದ ಅಶಾಂತಿ, ಚತುರ್ಥದಲ್ಲಿ ಸ್ವಜನ ಮತ್ತು ಕುಟುಂಬದಲ್ಲಿ ಅಭಿವೃದ್ಧಿ ಮತ್ತು ಧನಾಗಮ ಉಂಟಾಗುತ್ತದೆ. ಪಂಚಮದಲ್ಲಿ ಪತ್ನಿ ಮತ್ತು ಪುತ್ರ ರೊಂದಿಗೆ ಜಗಳ, ಸುಖನಾಶ, ಷಷ್ಠದಲ್ಲಿ ಭಾಗ್ಯೋದಯ ಸ್ಥಾನಲಾಭ, ಯಶಸ್ಸು ಮತ್ತು ಅಭಿವೃದ್ಧಿ ಉಂಟಾಗುತ್ತದೆ ಸಪ್ತಮದಲ್ಲಿ ಕಾಂತಿಹೀನತೆ ಮತ್ತು ಅತ್ಯಂತ ಕಲಹ ಸಂಭವಿಸುತ್ತದೆ. ಅಷ್ಟಮದಲ್ಲಿ ಲಾಭ, ಯಶಸ್ಸು, ಪುತ್ರಲಾಭ, ವಸ್ತ್ರ, ಧನ, ನಿಪುಣತೆ ಸುಖಶಾಂತಿಗಳು ಲಭಿಸುತ್ತವೆ. ನವಮದಲ್ಲಿ ಕೈಕೊಂಡ ಕಾರ್ಯಗಳಲ್ಲಿ ವಿಘ್ನಗಳು ಉಂಟಾಗುತ್ತವೆ. ದಶಮದಲ್ಲಿ ಶತ್ರುನಾಶ, ವಿಷಯ ಸುಖ, ಸ್ತ್ರೀ ಮತ್ತು ಧನಲಾಭ ಆಗುತ್ತದೆ. ಏಕಾದಶದಲ್ಲಿ ಧನ, ಸುತ, ಸುಖ, ಸ್ತ್ರೀ, ಮಿತ್ರವಾಹನ, ತೃಪ್ತಿ ಮತ್ತು ಸಂತೋಷ ಉಂಟಾಗುತ್ತದೆ. ವ್ಯಯದಲ್ಲಿ ಜಯ, ಶತ್ರುಗಳಿಂದ ಉಪದ್ರವ, ಮಾನಹಾನಿ, ತಿರಸ್ಕಾರ, ವ್ಯಾಧಿ, ವಿಷಯ ಸುಖದಲ್ಲಿ ವಿಘ್ನತೆ ಉಂಟಾಗುತ್ತದೆ.

ಗುರು : ಗುರುವು ಜನ್ಮರಾಶಿಯಲ್ಲಿ ಸಂಚರಿಸುವಾಗ ಧನಹರಣ, ಚಿತ್ತಭ್ರಮೆ, ಸ್ಥಾನನಾಶ, ಸಂಭವಿಸುತ್ತದೆ. ದ್ವಿತೀಯದಲ್ಲಿ ಧನಸಂಚಯ, ಶತ್ರುನಾಶ, ಸ್ತ್ರೀಸುಖ ಇತ್ಯಾದಿ ಲಭಿಸುತ್ತವೆ. ತೃತೀಯದಲ್ಲಿ ಪದಚ್ಯುತಿ, ಕೈಕೊಂಡ ಕಾರ್ಯಗಳಲ್ಲಿ ವಿಘ್ನತೆ ಉಂಟಾಗುತ್ತದೆ. ಚತುರ್ಥದಲ್ಲಿ ಕ್ಲೇಶ, ಬಂಧುಗಳೊಡನೆ ವಿವಾದ, ಅಶಾಂತಿ, ಮಾನಸಿಕ ಪೀಡೆಗಳು ಉಂಟಾಗುತ್ತವೆ. ಪಂಚಮದಲ್ಲಿ ಶುಭಕಾರ್ಯ, ಸೇವಕರು, ಪುತ್ರಲಾಭ, ವಾಹನಗಳು, ಪಶು ಸಂವೃದ್ಧಿ, ಕನಕ, ಗೃಹ, ಸ್ತ್ರೀ, ಆಭರಣ, ವಸ್ತ್ರ, ಸಂಪತ್ತು ಲಭಿಸುತ್ತದೆ ಮತ್ತು ಉತ್ತಮ ಗುಣಗಳಿಂದ ಕೂಡಿದವನು ಆಗುತ್ತಾನೆ. ಷಷ್ಠದಲ್ಲಿ ಅಸಂತುಷ್ಟ ಮನಸ್ಸು, ಮಿತ್ರರೊಡನೆ ಕಲಹ, ಸಂಶಯ ಪ್ರವೃತ್ತಿ, ಸಂಚಾರ, ವೈರಿಗಳಿಂದ ತೊಂದರೆ ಸಂಭವಿಸುತ್ತದೆ. ಸಪ್ತಮದಲ್ಲಿ ಶಯನ, ವಿಷಯಸುಖ, ಭೋಗ, ಧನಸಂಪತ್ತು, ಶೃಂಗಾರ ಸಾಧನಗಳು, ಬುದ್ಧಿಕುಶಲತೆ, ವಾಕ್ಪಟುತ್ವ, ವಾಹನ, ಸುಖ ಲಭಿಸುತ್ತದೆ. ಅಷ್ಟಮದಲ್ಲಿ ಬಂಧನ, ವ್ಯಾಧಿ, ಶೋಕ, ಕೋಪ, ಕಷ್ಟಕರ ಪ್ರಯಾಣಗಳು, ಅನಾರೋಗ್ಯದಿಂದ ಜೀವನ್ಮರಣಸ್ಥಿತಿ, ನವಮದಲ್ಲಿ ನಿಪುಣತೆ, ಅಧಿಕಾರ, ಪುತ್ರಲಾಭ, ಯಶಸ್ಸು, ಭೂಲಾಭ, ಕೈಕೊಂಡಕಾರ್ಯಗಳಲ್ಲಿ ಸಫಲತೆ ಲಭಿಸುತ್ತದೆ. ದಶಮದಲ್ಲಿ ಪದಚ್ಯುತಿ, ಅನಾರೋಗ್ಯ, ಧನನಷ್ಟ ಸಂಭವಿಸುತ್ತದೆ. ಏಕಾದಶದಲ್ಲಿ ಆರೋಗ್ಯ, ಧನ, ಲಾಭ, ಸ್ಥಾನಲಾಭ ಆಗುತ್ತದೆ. ವ್ಯಯದಲ್ಲಿ ಅನಾವಶ್ಯಕ ವಿಘ್ನಗಳು ಮತ್ತು ನ್ಯಾಯವಾದ ಕಾರ್ಯಗಳಲ್ಲಿ ಅಸಫಲತೆ ಉಂಟಾಗುತ್ತದೆ.

ಶುಕ್ರ: ಶುಕ್ರನು ಜನ್ಮರಾಶಿಯಲ್ಲಿ ಸಂಚರಿಸುವಾಗ ಸುಖಸಾಧನಗಳು, ವಿಷಯಸುಖ, ಪರಿವಾಳ ದ್ರವ್ಯಗಳು ಆಭರಣ, ಶಯನ, ಗೃಹ, ಆಸನ, ಭಕ್ಷ್ಯ, ಇತ್ಯಾದಿ ಲಭಿಸುತ್ತವೆ. ದ್ವಿತೀಯದಲ್ಲಿ ಸಂತತಿ, ಧನಲಾಭ, ಧಾನ್ಯ, ಸರಕಾರದಿಂದ ಮಾನ್ಯತೆ, ಕುಟುಂಬ ಹಿತಸಾಧನೆ, ವಿಷಯಸುಖ ಲಭಿಸುತ್ತದೆ. ತೃತೀಯದಲ್ಲಿ ಸ್ಥಾನಲಾಭ, ಧನಲಾಭ, ಮಾನ, ಅಧಿಕಾರ, ಅಭಿವೃದ್ಧಿ, ಶತ್ರುನಾಶ ಮತ್ತು ಸಂಪತ್ತು ಲಭಿಸುತ್ತದೆ. ಚತುರ್ಥದಲ್ಲಿ ಮಿತ್ರರೊಂದಿಗೆ ಸಭಾ ಸಮಾರಂಭಗಳಲ್ಲಿ ಭಾಗವಹಿಸುವುದು ಅಧಿಕಾರ ಮತ್ತು ಸುಖ ಲಭಿಸುತ್ತದೆ. ಪಂಚಮದಲ್ಲಿ ಗುರುಹಿರಿಯರು, ಕುಟುಂಬದವರು ಮತ್ತು ಹಿತಜನರೊಂದಿಗೆ ಸಮಾಗಮ, ಸಂತತಿಲಾಭ, ಧನಪ್ರಾಪ್ತಿ, ಮಿತ್ರಲಾಭ ಮತ್ತು ಶತ್ರುನಾಶ ಸಂಭವಿಸುತ್ತದೆ. ಷಷ್ಠದಲ್ಲಿ ಪರಾಭವ, ರೋಗ ಮತ್ತು ದುಃಖ ಇತ್ಯಾದಿ ಉಂಟಾಗುತ್ತದೆ. ಸಪ್ತಮದಲ್ಲಿ ಗುಹ್ಯರೋಗಗಳು, ಸ್ತ್ರೀಯರಿಂದ ಹಾನಿ

ಸಂಭವಿಸುತ್ತದೆ. ಅಷ್ಟಮದಲ್ಲಿ ಆಭರಣಗಳು ವಸ್ತ್ರ, ಸೇವಕರು, ಸುಖಸಾಧನಗಳು, ಭಾರ್ಯಾಸುಖಾದಿಗಳನ್ನು ಪಡೆಯುತ್ತಾನೆ. ನವಮದಲ್ಲಿ ಧಾರ್ಮಿಕ ಕಾರ್ಯಗಳು, ಸ್ತ್ರೀ ಸುಖ ಭಾಗ್ಯ ಧನ, ವಸ್ತ್ರಾದಿಗಳು ಲಭಿಸುತ್ತವೆ. ದಶಮದಲ್ಲಿ ಅವಮಾನ, ಕಲಹಗಳು ಉಂಟಾಗುತ್ತವೆ. ಲಾಭದಲ್ಲಿ ಪುತ್ರಲಾಭ, ಧನ, ಮಿತ್ರ, ಸುಗಂಧ ದ್ರವ್ಯಗಳು, ಉತ್ತಮ ಆಹಾರ ವಿಹಾರ ಲಭಿಸುತ್ತವೆ. ವ್ಯಯದಲ್ಲಿ ಆಭರಣ ಧನಾಗಮ, ಅಧಿಕ ಖರ್ಚು ಅಥವಾ ನಷ್ಟ ಸಂಭವಿಸುತ್ತದೆ.

**ಶನಿ:** ಶನಿಯು ಜನ್ಮರಾಶಿಯಲ್ಲಿ ಸಂಚರಿಸುವಾಗ ವಿಷದಿಂದ ರಾಸಾಯನಿಕ ವಸ್ತುಗಳಿಂದ ಮತ್ತು ಅಗ್ನಿಯಿಂದ ಹಾನಿ ಸಂಭವಿಸುತ್ತದೆ. ಸ್ವಜನರ ವಿರಹ, ಬಂಧುಗಳೊಂದಿಗೆ ಕಲಹ ವಿದೇಶ ಸಂಚಾರ, ಮನೆ, ಮಿತ್ರರು ಇತ್ಯಾದಿಗಳನ್ನು ಕಳಕೊಳ್ಳುತ್ತಾನೆ. ಅನಾರೋಗ್ಯ ಅನಾವಶ್ಯಕಸಂಚಾರ ಮತ್ತು ಮಾನಸಿಕ ವ್ಯಥೆ ಇತ್ಯಾದಿಗಳಿಂದ ಪೀಡಿಸಲ್ಪಡುತ್ತಾನೆ. ಧನನಷ್ಟ ಮತ್ತು ಸಂಪತ್ತಿನ ಅವನತಿ ಆಗುತ್ತದೆ. ಮಕ್ಕಳೊಂದಿಗೆ ಕಲಹ ಅಥವಾ ಮಕ್ಕಳನ್ನು ಕಳಕೊಳ್ಳುತ್ತಾನೆ. ದ್ವಿತೀಯದಲ್ಲಿ ಧನನಷ್ಟ ಸುಖನಾಶ, ಜೀರ್ಣಶರೀರ, ತೇಜೋಹೀನವಾದ ವದನ, ಮಾನನಷ್ಟ ಮತ್ತು ಶಕ್ತಿನಾಶ ಸಂಭವಿಸುತ್ತದೆ. ತೃತೀಯದಲ್ಲಿ ಸ್ಥಾನ ಲಾಭಅಥವಾ ವೃತ್ತಿಲಾಭ, ಧನಲಾಭ, ಧನಸಂಚಯ, ಶತ್ರುದಮನ ಮತ್ತು ಪಶು ಸಂಪತ್ತು ಲಭಿಸುತ್ತದೆ. ಚತುರ್ಥದಲ್ಲಿ ಮಿತ್ರ, ವಿತ್ತನಾಶ, ಪತ್ನಿ ವಿಯೋಗ, ಅಶಾಂತಿ, ಮಾನಸಿಕ ಪೀಡೆ, ದುಷ್ಕಾರ್ಯ, ಕಲಹ ಇತ್ಯಾದಿಗಳು ಸಂಭವಿಸುತ್ತದೆ. ಪಂಚಮದಲ್ಲಿ ಪುತ್ರಧನ ಇತ್ಯಾದಿಗಳನ್ನು ಕಳಕೊಳ್ಳುತ್ತಾನೆ. ಜಗಳ, ಕಲಹಗಳು ಸಂಭವಿಸುತ್ತವೆ. ಷಷ್ಠದಲ್ಲಿ ರೋಗವಿಮುಕ್ತತೆ, ಶತ್ರುನಾಶ, ಸ್ತ್ರೀ ಸುಖಾದಿಗಳು ಲಭಿಸುತ್ತವೆ. ಸಪ್ತಮದಲ್ಲಿ ಕಷ್ಟಕರವಾದ ಪ್ರಯಾಣಗಳು, ವ್ಯಾಪಾರದಲ್ಲಿ ಕಲಹ ಸಂಭವಿಸುತ್ತದೆ. ಅಷ್ಟಮದಲ್ಲಿ ಸ್ತ್ರೀ ಪುತ್ರರ ವಿಯೋಗ ಮತ್ತು ನೀಚಕರ್ಮದಲ್ಲಿ ಆಸಕ್ತಿ ಉಂಟಾಗುತ್ತದೆ. ನವಮದಲ್ಲಿ ಧಾರ್ಮಿಕ ಕಾರ್ಯಗಳಲ್ಲಿ ವಿಘ್ನ, ದ್ವೇಷ, ಕಲಹ, ಹೃದ್ರೋಗ ಮತ್ತು ಬಂಧನಗಳು ಉಂಟಾಗುತ್ತವೆ. ದಶಮದಲ್ಲಿ ಸ್ಥಾನಲಾಭ, ಧನಕ್ಷಯ, ವಿದ್ಯೆ ಮತ್ತು ಕೀರ್ತಿ ಪಡೆಯುತ್ತಾನೆ. ಲಾಭದಲ್ಲಿ ತೀಕ್ಷ್ಣಸ್ವಭಾವ, ಪರಸ್ತ್ರೀ ಮತ್ತು ಪರಧನ ಲಭಿಸುತ್ತದೆ. ವ್ಯಯದಲ್ಲಿ ಅನೇಕ ತರದ ದುಃಖಗಳು ಸಂಭವಿಸುತ್ತವೆ. ಧನನಾಶ, ಅನಾವಶ್ಯಕ ಸಂಚಾರ, ಕಾಲುನೋವು, ವಿಘ್ನಗಳು, ಸಂಪತ್ತಿನ ಅವನತಿ ಮತ್ತು ಕಳ್ಳಕಾಕರಿಂದ ಹಾನಿ ಸಂಭವಿಸುತ್ತದೆ. ಕೋರ್ಟು ವ್ಯವಹಾರದಿಂದ ನಷ್ಟ ಮತ್ತು ಶ್ರಮ ಉಂಟಾಗುತ್ತದೆ.

ರಾಹು: ರಾಹುವು ಜನ್ಮರಾಶಿಯಲ್ಲಿ ಗೋಚರಿಸುವಾಗ ಮಾನಸಿಕ ಅಶಾಂತಿ, ಕೈಕೊಂಡ ಕಾರ್ಯಗಳಲ್ಲಿ ಜಯಾಪಜಯ, ಸಾಮಾಜಿಕ ಚಟುವಟಿಕೆ, ನಷ್ಟ, ಹೆದರಿಕೆ, ಶಿರೋವೇದನೆ ಮತ್ತು ಚಂಚಲತೆ ನೀಡುತ್ತಾನೆ. ದ್ವಿತೀಯದಲ್ಲಿ ಧನ–ಸಂಪತ್ತಿನ ಅಭಿವೃದ್ಧಿ ಕೋರ್ಟು ಕಛೇರಿ ವ್ಯವಹಾರಗಳಲ್ಲಿ ನಷ್ಟ, ಕಲಹ, ಆರ್ಥಿಕ ಸಂಕಷ್ಟಗಳು ಸ್ವಜನರೊಂದಿಗೆ ವಿರೋಧ ಉಂಟಾಗುತ್ತದೆ. ತೃತೀಯದಲ್ಲಿ ಕೈಕೊಂಡ ಕಾರ್ಯಗಳಲ್ಲಿ ಜಯ, ಸಾಹಸಕಾರ್ಯಗಳು, ಕೀರ್ತಿ, ಯಶಸ್ಸು, ಸಹೋದರರೊಂದಿಗೆ ಕಲಹ ಅಥವಾ ಸಹೋದರ ನಾಶ, ಪ್ರಯಾಣಗಳು ಸಂಭವಿಸುತ್ತವೆ. ಚತುರ್ಥದಲ್ಲಿ ವಾಹನದಿಂದ ನಷ್ಟ, ಭೂವಿವಾದ, ಗೃಹ ಕಲಹ, ಸಂಪತ್ತಿನ ಅವನತಿ, ಸ್ಥಾನಚ್ಯುತಿ, ಹೃದಯವೇದನೆ ಇತ್ಯಾದಿ ಸಂಭವಿಸುತ್ತವೆ. ಪಂಚಮದಲ್ಲಿ ಸಂತಾನಚಿಂತೆ, ವಿದ್ಯಾಭ್ಯಾಸದಲ್ಲಿ ಪ್ರಗತಿ, ಆರ್ಥಿಕ ಸಂಕಷ್ಟಗಳು, ಉದರವ್ಯಾಧಿ ಇತ್ಯಾದಿ ಸಂಭವಿಸುತ್ತದೆ ಷಷ್ಠದಲ್ಲಿ ಶತ್ರು ನಾಶ, ಕರ್ಮದಲ್ಲಿ ಪ್ರಗತಿ, ಆರ್ಥಿಕ ಅಭಿವೃದ್ಧಿ, ಕ್ರೀಡೆಯಲ್ಲಿ ಜಯ ಲಭಿಸುತ್ತದೆ. ಸಪ್ತಮದಲ್ಲಿ ದಾಂಪತ್ಯ ವಿರಸ, ವ್ಯಾಪಾರದಲ್ಲಿ ಪ್ರಗತಿ, ಪ್ರಯಾಣದಿಂದ ಹಾನಿ, ಸ್ಥಾನಚ್ಯುತಿ, ಅಪವಾದ ಕೈಕೊಂಡ ಕಾರ್ಯಗಳಲ್ಲಿ ತಡೆ ಉಂಟಾಗುತ್ತದೆ. ಅಷ್ಟಮದಲ್ಲಿ ಆಕಸ್ಮಿಕ ಧನಪ್ರಾಪ್ತಿ, ಅಪಘಾತಗಳು, ಮರಣಶಾಸನಧನ ಲಭಿಸುತ್ತದೆ. ನವಮದಲ್ಲಿ ತೀರ್ಥಯಾತ್ರೆ, ಗೃಹದಲ್ಲಿ ಶುಭಸಮಾರಂಭಗಳು, ತಂದೆಯ ಅಥವಾ ಹಿರಿಯರ ಅವಸಾನ ಸಹೋದರರೊಡನೆ ಭೇದಾಭಿಪ್ರಾಯ ಉಂಟಾಗುತ್ತದೆ, ದಶಮದಲ್ಲಿ ಕೈಕೊಂಡಕಾರ್ಯಗಳಲ್ಲಿ ಯಶಸ್ಸು, ಉದ್ಯೋಗದಲ್ಲಿ ಪ್ರಗತಿ ನೂತನ ಉದ್ಯಮಗಳ ಸ್ಥಾಪನೆ, ಇತ್ಯಾದಿಗಳಿಂದ ಧನಪ್ರಾಪ್ತಿ ಉಂಟಾಗುತ್ತದೆ. ಏಕಾದಶದಲ್ಲಿ ಸಂತಾನಚಿಂತೆ, ಧನಲಾಭ ಸಾಲಕೊಡುವುದರಿಂದ ಅಥವಾ ಜಾಮೀನು ವ್ಯವಹಾರದಿಂದ ನಷ್ಟ ಸಂಭವಿಸುತ್ತದೆ ವ್ಯಯದಲ್ಲಿ ಅನಾವಶ್ಯಕ ಸಂಚಾರ, ಅಧಿಕ ಖರ್ಚು, ಧನನಷ್ಟ, ಅನಾರೋಗ್ಯ, ಚೋರರಿಂದ ಹಾನಿ, ನಿದ್ರಾನಾಶ ಸಂಭವಿಸುತ್ತವೆ.

ಜನನ ಜಾತಕದಲ್ಲಿ ರಾಹುವು ಶುಭದೃಷ್ಟ ಅಥವಾ ಶುಭಯುತನಾದರೆ ಅಶುಭಫಲಗಳು ಲಘುವಾಗಿ ಶುಭಫಲಗಳು ಲಭಿಸುತ್ತದೆ.

ಕೇತು: ಕೇತುವು ಜನ್ಮರಾಶಿಯಲ್ಲಿ ಸಂಚರಿಸುವಾಗ ಚಿತ್ತಭ್ರಮೆ, ಮಾನಸಿಕ ಭಯ, ಉದ್ವೇಗ, ನರಗಳ ದುರ್ಬಲತೆ, ವಿಚಾರದಲ್ಲಿ ತಡೆಯನ್ನು ಉಂಟುಮಾಡುತ್ತಾನೆ. ದಿತೀಯದಲ್ಲಿ ಮಾತಿನಿಂದ ಕಲಹ, ಕುಟುಂಬದಲ್ಲಿ ಅಶಾಂತಿ,

ಆರ್ಥಿಕ ಸಂಕಷ್ಟಗಳನ್ನು ನೀಡುತ್ತಾನೆ. ತೃತೀಯದಲ್ಲಿ ಸಾಹಸ, ಜಯ, ಕೀರ್ತಿ, ಸಹೋದರರೊಂದಿಗೆ ಬೇಧಾಭಿಪ್ರಾಯ, ಪ್ರಯಾಣ ನೂತನ ಉದ್ಯಮ ಇತ್ಯಾದಿ ನೀಡುತ್ತಾನೆ. ಚತುರ್ಥದಲ್ಲಿ ಭಯ, ವಾಹನದಿಂದ ನಷ್ಟ, ಸಂಬಂಧಿಕರೊಂದಿಗೆ ಕಲಹ, ಸ್ಥಾನಚ್ಯುತಿ ನೀಡುತ್ತಾನೆ. ಪಂಚಮದಲ್ಲಿ ಮಾನಸಿಕ ಅಶಾಂತಿ, ಭಯ, ಸಂತಾನಚಿಂತೆ, ಉದರವ್ಯಾಧಿ ನೀಡುತ್ತಾನೆ. ಷಷ್ಠದಲ್ಲಿ ಶತ್ರುನಾಶ, ಕರ್ಮದಲ್ಲಿ ಪ್ರಗತಿ, ವಿವಾದಗಳು, ನೂತನ ಉದ್ಯಮ ನೀಡುತ್ತಾನೆ. ಸಪ್ತಮದಲ್ಲಿ ದಾಂಪತ್ಯವಿರಸ, ವಿವಾಹದಲ್ಲಿ ವಿಳಂಬ, ಪ್ರಯಾಣದಲ್ಲಿ ನಷ್ಟ, ಆರ್ಥಿಕ ಸಂಕಷ್ಟಗಳು, ವ್ಯಾಪಾರದಲ್ಲಿ ಕಲಹ ಸಂಭವಿಸುತ್ತದೆ. ಅಷ್ಟಮದಲ್ಲಿ ಭಯ, ರೋಗ, ಧನನಾಶ ಸಂಭವಿಸುತ್ತದೆ. ನವಮದಲ್ಲಿ ತೀರ್ಥಯಾತ್ರೆ, ದೇವತಾರಾಧನೆ, ಹಿರಿಯರಿಗೆ ಅನಾರೋಗ್ಯ, ಜ್ಞಾನಪ್ರಾಪ್ತಿ ಉಂಟಾಗುತ್ತದೆ. ದಶಮದಲ್ಲಿ ನೂತನ ಆವಿಷ್ಕಾರಗಳು, ವೃತ್ತಿಬದಲಾವಣೆ, ಸ್ಥಾನಚ್ಯುತಿ ಸಂಭವಿಸುತ್ತದೆ. ಏಕಾದಶದಲ್ಲಿ ಆರ್ಥಿಕಲಾಭ, ಪ್ರಗತಿ, ಸಾಲ ನೀಡುವುದು ಮತ್ತು ಜಾಮೀನು ವ್ಯವಹಾರಗಳಿಂದ ಹಾನಿ, ಸಂತಾನಚಿಂತೆ ಉಂಟಾಗುತ್ತದೆ. ವ್ಯಯದಲ್ಲಿ ವಿದೇಶಸಂಚಾರ, ಜ್ಞಾನಪ್ರಾಪ್ತಿ, ಸತ್ಕಾರ್ಯಗಳು, ಸಂಚಾರ ಸಂಭವಿಸುತ್ತವೆ.

ರಾಹು–ಕೇತುಗಳು ಗೋಚರದಲ್ಲಿ ಸಾಮಾನ್ಯವಾಗಿ ಕುಜನ ಗೋಚರಫಲದಂತೆ ಕೂಡಾ ತಮ್ಮ ಚಾರಫಲವನ್ನು ನೀಡುತ್ತಾರೆ.

ಶಾಂತಿ, ಜಪ, ದೇವತಾರಾಧನೆ, ಸತ್ಸಂಗ ಇತ್ಯಾದಿ ಕಾರ್ಯಗಳಿಂದ, ಅಶುಭಫಲಗಳ ನಾಶವಾಗುತ್ತದೆ.

ಸೂರ್ಯ ಮತ್ತು ಕುಜರು ತಮ್ಮ ಗೋಚರದ ಶುಭಾಶುಭಫಲಗಳನ್ನು ರಾಶಿಯ ಪ್ರಥಮ ದ್ರೇಕ್ಕಾಣದಲ್ಲಿ ಸಂಚರಿಸುವಾಗ ನೀಡುತ್ತಾರೆ. ಚಂದ್ರ-ಶನಿಗಳು ರಾಶಿಯ ಅಂತ್ಯ-ದ್ರೇಕ್ಕಾಣ ಸಂಚರಿಸುವಾಗ ತಮ್ಮ ಶುಭಾಶುಭಫಲವನ್ನು ನೀಡುತ್ತಾರೆ. ಗುರು–ಶುಕ್ರರು ರಾಶಿಯ ಮಧ್ಯ ದ್ರೇಕ್ಕಾಣದಲ್ಲಿ ಸಂಚರಿಸುವಾಗ ತಮ್ಮ ಶುಭಾಶುಭಫಲವನ್ನು ನೀಡುತ್ತಾರೆ. ಬುಧನು ಇಡೀ ರಾಶಿಯ ಸಂಚಾರಕಾಲದಲ್ಲಿ ಫಲವನ್ನು ನೀಡುತ್ತಾನೆ.

ಜನನ ಕಾಲದ ಜಾತಕದಲ್ಲಿ ಸ್ವಕ್ಷೇತ್ರ, ಉಚ್ಚದಲ್ಲಿದ್ದ ಗ್ರಹನ ಚಾರಫಲವು ಅಶುಭಸೂಚಿತವಾದರೂ, ಅಶುಭಫಲ ನೀಡುವುದಿಲ್ಲ. ಹಾಗೆಯೇ ಜನನ

ಜಾತಕದಲ್ಲಿ ನೀಚ, ಶತ್ರುಕ್ಷೇತ್ರಗತನಾದ ಗ್ರಹನು ಚಾರದ ಶುಭಫಲವನ್ನು ನೀಡುವುದಿಲ್ಲ. ಅಸ್ತಂಗತ ಗ್ರಹರು ತಮ್ಮ ಚಾರದ ಅರ್ಧಫಲವನ್ನು ಕಳಕೊಳ್ಳುತ್ತಾರೆ.

ಸೂರ್ಯ, ಕುಜ, ಶನಿ ಮತ್ತು ಗುರುವು ಜನ್ಮರಾಶಿ, ದ್ವಾದಶರಾಶಿ ಮತ್ತು ಅಷ್ಟಮ ರಾಶಿಗಳಲ್ಲಿ ಸಂಚರಿಸುವಾಗ ಧನನಷ್ಟ, ಪ್ರವಾಸ, ರೋಗ ಮತ್ತು ಮರಣಭಯವನ್ನು ನೀಡುತ್ತಾರೆ.

**ಗ್ರಹವೇಧ :** ಗೋಚರದಲ್ಲಿ ಗ್ರಹರು ನೀಡುವ ಫಲವನ್ನು ಚಂದ್ರನಿಂದ ಕೆಲವು ಸ್ಥಾನಗಳಲ್ಲಿ ಇತರ ಗ್ರಹರು ಇದ್ದರೆ, ಶುಭಾಶುಭಫಲವನ್ನು ನಾಶ ಮಾಡುತ್ತಾರೆ. ಇದನ್ನು ವೇಧವೆಂದು ಕರೆಯುತ್ತಾರೆ. ಚಾರ ಗ್ರಹಸ್ಥಾನ ಹಾಗೂ ಅದರ ವೇಧಸ್ಥಾನವನ್ನು ಕೆಳಗೆ ಬರೆದಿರುತ್ತದೆ.

ಸೂರ್ಯ 11-5, 3-9, 10-4, 6-12.

ಚಂದ್ರ 7-2, 1-5, 6-12, 11-8, 10-4, 3-9.

ಕುಜ-ಶನಿ 3-12, 11-5, 6-9.

ಬುಧ 2-5, 4-3, 6-9, 8-1, 10-7, 11-12.

ಗುರು 2-12, 11-8, 9-10, 5-4, 7-3.

ಶುಕ್ರ 1-8, 2-7, 3-1, 4-10, 5-9, 8-5, 9-11, 12-6, 11-3.

ಚಂದ್ರ ಮತ್ತು ಬುಧರಲ್ಲಿ ಹಾಗೂ ಸೂರ್ಯ ಮತ್ತು ಶನಿಗಳಲ್ಲಿ ವೇಧ ವಿಲ್ಲ. ಉದಾ: ವೃಷಭರಾಶಿ, ಚಾರದಲ್ಲಿ ಶನಿಯು ಏಕಾದಶದಲ್ಲಿ ಅಂದರೆ ಮೀನದಲ್ಲಿ ಇದ್ದಾನೆ. ಏಕಾದಶದ ಶನಿಗೆ ಪಂಚವು (11-5) ವೇಧಸ್ಥಾನ, ಅಂದರೆ ಚಂದ್ರಸ್ಥಿತ ರಾಶಿಯಿಂದ ಪಂಚಮವು ವೇಧಸ್ಥಾನ. ಈ ಉದಾಹರಣೆ ಯಲ್ಲಿ ವೃಷಭದಿಂದ ಪಂಚಮವಾದ ಕನ್ಯಾರಾಶಿಯು ವೇಧಸ್ಥಾನ ಆಗುತ್ತದೆ. ಕನ್ಯಾರಾಶಿಯಲ್ಲಿ ಗ್ರಹರಿದ್ದರೆ ಶನಿಯ ಶುಭಾಶುಭಫಲಗಳು ಫಲಿಸುವುದಿಲ್ಲ. ಸೂರ್ಯ-ಶನಿಗಳೊಳಗೆ ವೇಧವಿಲ್ಲದ್ದರಿಂದ ಸೂರ್ಯನು ಕನ್ಯೆಯಲ್ಲಿದ್ದರೆ ಗ್ರಹವೇಧ ಇಲ್ಲ.

# ೫೪. ಅಷ್ಟಕವರ್ಗ ಪದ್ಧತಿ

ಗ್ರಹರ ಚಾರಫಲವನ್ನು ತಿಳಿಯಲು ಅಷ್ಟಕವರ್ಗ ಪದ್ಧತಿ ಕೂಡಾ ಸಹಾಯಕ ಆಗಿರುತ್ತದೆ. ಜನನಕಾಲದ ಗ್ರಹನು ಪ್ರತಿರಾಶಿ ಸಂಚಾರದಲ್ಲಿ ಜನನ ಕಾಲದ ಸ್ಥಿತಿಯಿಂದ ಕೆಲವು ರಾಶಿಗಳಲ್ಲಿ ಶುಭಾಶುಭಫಲಗಳನ್ನು ನೀಡುವುದನ್ನು ಅಷ್ಟಕವರ್ಗ ಪದ್ಧತಿಯಿಂದ ತಿಳಿಯುತ್ತಾರೆ. ಎರಡು ಪ್ರಕಾಶಕ ಗ್ರಹರು. ಐದು ತಾರಾಗ್ರಹರು ಮತ್ತು ಲಗ್ನ. ಅಷ್ಟಕವರ್ಗ ಶೋಧನೆಗೆ ಆಧಾರ ಆಗಿರುತ್ತದೆ. ಪ್ರತಿಯೊಂದು ಗ್ರಹವು ತಾನಿರುವ ಸ್ಥಾನದಿಂದ ಕೆಲವು ರಾಶಿ ಚಾರದಲ್ಲಿ ಶುಭಫಲವನ್ನು ನೀಡುವ ಸ್ಥಾನಗಳನ್ನು ಇಲ್ಲಿ ಬರೆದಿರುತ್ತದೆ.

**1. ರವಿ. ಅಷ್ಟಕವರ್ಗ = 48 ಶುಭ ಬಿಂದುಗಳು**

ರವಿಯು ತಾನಿರುವ ರಾಶಿಯಿಂದ 1, 2, 4, 7, 8, 9, 10, 11, ಚಂದ್ರನಿಂದ 3, 6, 10, 11, ಕುಜನಿಂದ 1, 2, 4, 7, 8, 9, 10, 11, ಬುಧನಿಂದ 3, 5, 6, 9, 10, 11, 12, ಗುರುವಿನಿಂದ 5, 6, 9, 11, ಶುಕ್ರನಿಂದ 6, 7, 12, ಶನಿಯಿಂದ 1, 2, 4, 7, 8, 9 10, 11, ಲಗ್ನದಿಂದ 3, 4, 6, 10, 11 ಮತ್ತು 12 ಈ ರಾಶಿ ಸಂಚಾರದಲ್ಲಿ ಶುಭಫಲವನ್ನು ಇತರ ರಾಶಿಸಂಚಾರದಲ್ಲಿ ಅಶುಭಫಲವನ್ನು ನೀಡುತ್ತಾನೆ

**2. ಚಂದ್ರ ಅಷ್ಟಕವರ್ಗ = 49 ಶುಭ ಬಿಂದುಗಳು**

ಚಂದ್ರನು ರವಿಯಿಂದ 3, 6, 7, 8, 10, 11, ತಾನಿರುವ ರಾಶಿಯಿಂದ 1, 3, 6, 7, 10, 11 ಕುಜನಿಂದ 2, 3, 5, 6, 9, 10, 11 ಬುಧನಿಂದ 1, 3, 4, 5, 7, 8, 10, 11 ಗುರುವಿನಿಂದ 1, 4, 7, 8, 10, 11, 12 ಶುಕ್ರನಿಂದ 3, 4, 5, 7, 9, 10, 11 ಶನಿಯಿಂದ 3, 5, 6, 11 ಲಗ್ನದಿಂದ 3, 6, 10 ಮತ್ತು 11 ಸ್ಥಾನಗಳಲ್ಲಿ ಶುಭಫಲ ನೀಡುತ್ತಾನೆ.

**3. ಕುಜ ಅಷ್ಟಕವರ್ಗ = 39 ಶುಭ ಬಿಂದುಗಳು**

ಕುಜನು ರವಿಯಿಂದ 3, 5, 6, 10, 11 ಚಂದ್ರನಿಂದ 3, 6, 11 ತಾನಿರುವ ಸ್ಥಳದಿಂದ 1, 2, 4, 7, 8, 10, 11 ಬುಧನಿಂದ 3, 5, 6, 11 ಗುರುವಿನಿಂದ 6, 10, 11, 12 ಶುಕ್ರನಿಂದ 6, 8, 11, 12 ಶನಿಯಿಂದ 1, 4, 7, 8, 9, 10, 11 ಲಗ್ನದಿಂದ 1, 3, 6, 10, 11ರಲ್ಲಿ ಶುಭನು.

4. ಬುಧ ಅಷ್ಟಕವರ್ಗ = 54 ಶುಭ ಬಿಂದುಗಳು

ಬುಧನು ರವಿಯಿಂದ 5. 6. 9. 11. 12 ಚಂದ್ರನಿಂದ 2. 4, 6. 8. 10. 11 ಕುಜನಿಂದ 1, 2. 4. 7. 8. 9. 10, 11 ತಾನಿರುವ ಸ್ಥಳದಿಂದ 1. 3. 5 6. 9. 10. 11. 12 ಗುರುವಿನಿಂದ 6. 8. 11, 12 ಶುಕ್ರನಿಂದ 1, 2. 3 4, 5, 8, 9, 11 ಶನಿಯಿಂದ 1, 2, 4. 7. 8. 9, 10, 11 ಲಗ್ನದಿಂದ 1. 2. 4. 6, 8, 10. 11ರಲ್ಲಿ ಶುಭನು.

5. ಗುರು ಅಷ್ಟಕವರ್ಗ = 56 ಶುಭ ಬಿಂದುಗಳು

ಗುರುವು ರವಿಯಿಂದ 1. 2. 3. 4. 7, 8. 9. 10, 11 ಚಂದ್ರನಿಂದ 2, 5. 7. 9, 11 ಕುಜನಿಂದ 1. 2. 4. 7, 8. 10. 11 ಬುಧನಿಂದ 1.2, 4, 5. 6. 9, 10. 11 ತಾನಿರುವ ಸ್ಥಳದಿಂದ 1, 2. 3, 4, 7. 8. 10, 11 ಶುಕ್ರನಿಂದ 2, 5. 6. 9. 10, 11 ಶನಿಯಿಂದ 3, 5, 6, 12 ಲಗ್ನದಿಂದ 1, 2, 4. 5. 6. 9. 10, 11ರಲ್ಲಿ ಶುಭನು.

6. ಶುಕ್ರ ಅಷ್ಟಕವರ್ಗ = 52 ಶುಭ ಬಿಂದುಗಳು

ಶುಕ್ರನು ರವಿಯಿಂದ 8. 11, 12 ಚಂದ್ರನಿಂದ 1. 2. 3, 4, 5, 8. 9, 11, 12 ಕುಜನಿಂದ 3, 5, 6, 9, 11. 12 ಬುಧನಿಂದ 3,5,6,9,11. ಗುರುವಿನಿಂದ 5, 8. 9. 10. 11 ತಾನಿರುವ ಸ್ಥಳದಿಂದ 1, 2, 3. 4. 5. 8, 9, 10, 11 ಶನಿಯಿಂದ 3, 4, 5, 8, 9, 10, 11 ಲಗ್ನದಿಂದ 1, 2, 3. 4. 5, 8. 9, 11ರಲ್ಲಿ ಶುಭನು.

7. ಶನಿ ಅಷ್ಟಕವರ್ಗ = 39 ಶುಭ ಬಿಂದುಗಳು

ಶನಿಯು ರವಿಯಿಂದ 1, 2, 4, 7, 8, 10, 11 ಚಂದ್ರನಿಂದ 3,6, 11 ಕುಜನಿಂದ 3, 5, 6, 10, 11, 12 ಬುಧನಿಂದ 6, 8, 9, 10, 11, 12 ಗುರುವಿನಿಂದ 5, 6, 11. 12 ಶುಕ್ರನಿಂದ 6, 11, 12 ಶನಿಯಿಂದ 3, 5, 6, 11 ಲಗ್ನದಿಂದ 1, 3 4. 6. 10, 11ರಲ್ಲಿ ಶುಭನು.

ಭಿನ್ನಾಷ್ಟಕವರ್ಗ : ಪ್ರಥಮತಃ ಸಪ್ತಗ್ರಹಗಿಗೆ ಏಳು ಕುಂಡಳಿಯನ್ನು ಬರೆದು. ಪ್ರತಿಯೊಂದು ಕುಂಡಳಿಯಲ್ಲಿ ಜನನಕಾಲದ ಗ್ರಹನನ್ನು ಆಧರಿಸಿ, ರವಿ

ಯಿಂದ ಪ್ರಾರಂಭಿಸಿ, ಮೇಲೆ ಹೇಳಿದ ಸ್ಥಾನಗಳಲ್ಲಿ ಬಿಂದುಗಳಿಂದ ಗುರುತಿಸ ಬೇಕು. ಇದನ್ನು ಭಿನ್ನಾಷ್ಟಕವರ್ಗ ಎಂದು ಕರೆಯುತ್ತಾರೆ. ಹೆಚ್ಚು ಬಿಂದು ಗಳು ಇರುವ ರಾಶಿಯಲ್ಲಿ ಗ್ರಹರು ಸಂಚರಿಸುವಾಗ ಶುಭಫಲವನ್ನು ನೀಡುತ್ತಾರೆ.

ಸರ್ವಾಷ್ಟಕವರ್ಗ : ಪ್ರತಿಯೊಂದು ಕುಂಡಳಿಯಲ್ಲಿ ಆಯಾರಾಶಿಗೆ ಲಭಿಸಿದ ಶುಭಬಿಂದುಗಳ ಮೊತ್ತದ ಕೋಷ್ಟಕವನ್ನು ತಯಾರಿಸಬೇಕು. ಇದನ್ನು ಸರ್ವಾಷ್ಟಕವರ್ಗ ಅಥವಾ ಸಾಮುದಾಯ ಅಷ್ಟಕವರ್ಗ ಎಂದು ಕರೆಯುತ್ತಾರೆ. ಇದರಲ್ಲಿ ಒಟ್ಟು 337 ಬಿಂದುಗಳಿವೆ. ಸರ್ವಾಷ್ಟಕವರ್ಗದಲ್ಲಿ 25ಕ್ಕಿಂತ ಕಮ್ಮಿ ಬಿಂದು ಇರುವ ರಾಶಿಗೆ ಅನುಗುಣವಾದ ಭಾವಫಲವು ದುರ್ಬಲ ಆಗು ತ್ತದೆ. 25ರಿಂದ 30ರ ವರೆಗೆ ಬಿಂದು ಇದ್ದರೆ ಮಧ್ಯಮಫಲ, 30ಕ್ಕಿಂತ ಅಧಿಕ ಬಿಂದು ಇರುವ ಭಾವಫಲವು ಉತ್ತಮ ಆಗಿರುತ್ತದೆ.

ಗ್ರಹಕಕ್ಷೆ: ಒಂದು ರಾಶಿಯನ್ನು ಎಂಟು ವಿಭಾಗಗಳನ್ನಾಗಿ ಮಾಡು ತ್ತಾರೆ. ಪ್ರತಿಯೊಂದು ಭಾಗವು 3° 45′ ಆಗಿರುತ್ತದೆ. ಇದನ್ನು ಕಕ್ಷೆ ಎಂದು ಕರೆಯುತ್ತಾರೆ. ಅತೀ ದೂರದಲ್ಲಿರುವ ಗ್ರಹ ಶನಿಗೆ ಪ್ರಥಮ ಕಕ್ಷಾ ಅಧಿಪತ್ಯವನ್ನು ಅನಂತರ (2) ಗುರು (3) ಕುಜ (4) ರವಿ (5) ಶುಕ್ರ (6) ಬುಧ (7) ಚಂದ್ರ ಮತ್ತು (8) ಲಗ್ನಕ್ಕೆ ಅನುಕ್ರಮವಾಗಿ ಪ್ರತಿ ಒಂದು ರಾಶಿಯಲ್ಲಿ ಕಕ್ಷಾ ಅಧಿಪತ್ಯವನ್ನು ಕೊಡಲಾಗಿದೆ. ಗ್ರಹರು ಚಾರದಲ್ಲಿ ಸ್ವಕಕ್ಷೆಗಳಲ್ಲಿ ಸಂಚರಿಸುವಾಗ ತಮ್ಮ ಬಿಂದುಗಳಿದ್ದರೆ ಆ ಕಕ್ಷಾಚಾರದಲ್ಲಿ ಭಾವ ಮತ್ತು ಅಧಿಪತ್ಯಕ್ಕೆ ಅನುಗುಣವಾದ ಶುಭಫಲ ಲಭಿಸುತ್ತದೆ.

### ಪ್ರತಿಯೊಂದು ರಾಶಿಯಲ್ಲಿ ಕ್ರಮವಾಗಿರುವ ಕಕ್ಷೆಗಳು

1. 0° – 3°45′—ಶನಿಕಕ್ಷೆ  2. 3°46′— 7°—30′ ಗುರುಕಕ್ಷೆ

3. 7°—31′—11°—15′ ಕುಜಕಕ್ಷೆ  4. 11°—16′ 15° ರವಿಕಕ್ಷೆ

5. 15°.1′-18°-45′ ಶುಕ್ರಕಕ್ಷೆ  6. 18°-46′ 22°-30′ಬುಧಕಕ್ಷೆ

7. 22°-31′-26°.15′ ಚಂದ್ರಕಕ್ಷೆ 8. 26°-16′ 30° ಲಗ್ನಕಕ್ಷೆ ಇರುತ್ತದೆ.

# ೫೫. ಲಗ್ನ—ಗ್ರಹರ ಶುಭಾಶುಭ ವಿಚಾರ

**1.** ಮೇಷಲಗ್ನದವರಿಗೆ ಲಾಭಾಧಿಪತಿಯಾದ್ದರಿಂದ ಶನಿಯು ತೃತೀಯ ಷಷ್ಠಾಧಿಪತಿಯಾದ್ದರಿಂದ ಬುಧನು. ಧನಸಪ್ತಮಾಧಿಪ ಶುಕ್ರನು ಪಾಪಫಲ ನೀಡುತ್ತಾರೆ. ಲಾಭಾಧಿಪತಿ ಶನಿ, ಷಷ್ಠಾಧಿಪತಿ ಬುಧ ಮತ್ತು ಪಾಪಸಂಬಂಧ ಅಥವಾ ದೂಷಿತ ಶುಕ್ರನು. ಮಾರಕರು ಆಗುತ್ತಾರೆ. ಭಾಗ್ಯಾಧಿಪತಿ ಗುರು ಮತ್ತು ಪಂಚಮಾಧಿಪತಿ ರವಿ ಶುಭಫಲ ನೀಡುತ್ತಾರೆ. ಲಗ್ನಾಧಿಪತಿ ಕುಜನು, ಅಷ್ಟಮಾಧಿಪತಿಯಾದ್ದರಿಂದ ಮತ್ತು ಚಂದ್ರನಿಗೆ ಕೇಂದ್ರಾಧಿಪತ್ಯ ದೋಷ ಇರುವುದರಿಂದ ಕುಜ-ಚಂದ್ರರು ಮಿಶ್ರಫಲದಾಯಕರು. ಪಂಚಮಾಧಿಪತಿ ರವಿ ಮತ್ತು ಚತುರ್ಥಾಧಿಪತಿ ಚಂದನಯುತಿಯು ಹಾಗೂ ರವಿ-ಗುರು ಯುತಿಯು ರಾಜಯೋಗ ಕಾರಕ ಆಗಿರುತ್ತದೆ.

**2.** ವೃಷಭಲಗ್ನದವರಿಗೆ ಲಗ್ನಾಧಿಪತಿಯಾದರೂ ಷಷ್ಠಾಧಿಪತಿ ಶುಕ್ರನು, ಅಷ್ಟಮಲಾಭಾಧಿಪತಿ ಗುರುವು ಮತ್ತು ತೃತೀಯಾಧಿಪತಿ ಶುಕ್ರನು ಪಾಪಫಲ ನೀಡುತ್ತಾರೆ. ಮತ್ತು ಮಾರಕ ಗ್ರಹರು ಆಗಿರುತ್ತಾರೆ. ಕುಜನು ಸಪ್ತಮಾಧಿಪತಿಯಾದರೂ ವ್ಯಯಾಧಿಪತಿ ಆದ್ದರಿಂದ ಮಿಶ್ರಫಲವನ್ನು ನೀಡುತ್ತಾನೆ. ಭಾಗ್ಯ–ಕರ್ಮಾಧಿಪ ಶನಿಯು ಈ ಲಗ್ನದವರಿಗೆ ಯೋಗಕಾರಕನು, ಪಂಚಮಾಧಿಪತಿ ಬುಧ, ಚತುರ್ಥಾಧಿಪತಿ ರವಿ ಮತ್ತು ಭಾಗ್ಯಾಧಿಪತಿ ಶನಿಯು ಶುಭಫಲವನ್ನು ನೀಡುತ್ತಾನೆ.

**3.** ಮಿಥುನಲಗ್ನದವರಿಗೆ ಷಷ್ಠಲಾಭಾಧಿಪತಿ ಕುಜ, ಸಪ್ತಮಾಧಿಪ ಗುರು ಮತ್ತು ತೃತಿಯಾಧಿಪ ರವಿಯು ಪಾಪಫಲ ನೀಡುತ್ತಾರೆ. ಗುರು, ಕುಜರು ಮಾರಕಾಧಿಪತಿಗಳು. ಲಗ್ನ ಚತುರ್ಥಾಧಿಪತಿ ಬುಧನು ಕೇಂದ್ರಾಧಿಪತ್ಯ ದೋಷ ಇರುವುದರಿಂದ, ದ್ವಿತೀಯಾಧಿಪತಿಚಂದ್ರ ಮತ್ತು ಭಾಗ್ಯಾಧಿಪತಿ ಯಾದರೂ ಅಷ್ಟಮಾಧಿಪತಿಯಾದ್ದರಿಂದ ಶನಿಯು ಮಿಶ್ರಫಲವನ್ನು ನೀಡುತ್ತಾರೆ. ಶುಕ್ರ–ಬುಧ ಯುತಿಯು ಯೋಗಕಾರಕ ಆಗಿರುತ್ತದೆ. ಪಂಚಮಾಧಿಪತಿ ಶುಕ್ರನು ಶುಭಫಲವನ್ನು ನೀಡುತ್ತಾನೆ.

**4.** ಕರ್ಕಾಟಕಲಗ್ನದವರಿಗೆ ಚತುರ್ಥ ಲಾಭಾಧಿಪತಿ ಶುಕ್ರನು, ತೃತೀಯ ವ್ಯಯಾಧಿಪತಿ ಬುಧನು, ಸಪ್ತಮ ಅಷ್ಟಮಾಧಿಪತಿ ಶನಿಯು ಪಾಪಫಲ

ನೀಡುತ್ತಾರೆ. ಲಾಭಾಧಿಪ ಶುಕ್ರ, ಅಷ್ಟಮಾಧಿಪ ಶನಿ ಮತ್ತು ದೂಷಿತ ಬುಧನು ಮಾರಕರು ಆಗುತ್ತಾರೆ. ಷಷ್ಠಾಧಿಪತಿಯಾದರೂ ಭಾಗ್ಯಾಧಿಪ ಗುರುವು ಮತ್ತು ಪಂಚಮ-ಕರ್ಮಾಧಿಪತಿ ಕುಜನು ಶುಭಫಲವನ್ನು ನೀಡುತ್ತಾರೆ. ಕೇಂದ್ರ ತ್ರಿಕೋಣಾಧಿಪತಿ ಕುಜನು ಯೋಗಕಾರಕನು, ರವಿ-ಚಂದ್ರರು ಮಿಶ್ರಫಲ ದಾಯಕರು ಆಗಿರುತ್ತಾರೆ.

5. ಸಿಂಹಲಗ್ನ ದವರಿಗೆ ಲಾಭಾಧಿಪತಿ ಬುಧ ಮತ್ತು ತೃತಿಯಾಧಿ ಪತಿ ಶುಕ್ರನು ಪಾಪಫಲ ನೀಡುತ್ತಾರೆ. ಹಾಗೂ ಮಾರಕಾಧಿಪತಿಗಳು ಆಗಿರು ತ್ತಾರೆ. ಕೇಂದ್ರ ತ್ರಿಕೋಣಾಧಿಪತಿ ಕುಜನು ಶುಭಫಲ ನೀಡುವವನು, ಯೋಗ ಕಾರಕನು ಆಗಿರುತ್ತಾನೆ. ಅಷ್ಟಮಾಧಿಪತಿ ಗುರು ಷಷ್ಠಾಧಿಪತಿ ಶನಿ, ವ್ಯಯಾಧಿಪತಿ ಚಂದ್ರ ಮತ್ತು ಲಗ್ನಾಧಿಪತಿ ರವಿಯು ಮಿಶ್ರಫಲದಾಯಕರು ಆಗಿರುತ್ತಾರೆ.

6. ಕನ್ಯಾಲಗ್ನ ತೃತೀಯ ಅಷ್ಟಮಾಧಿಪತಿ ಕುಜ, ಕೇಂದ್ರಾಧಿಪತ್ಯದ ಗುರು, ಲಾಭಾಧಿಪತಿ ಚಂದ್ರ ಪಾಪಫಲ ನೀಡುತ್ತಾರೆ. ಅಷ್ಟಮಾಧಿಪತಿ ಕುಜ ಮತ್ತು ಸಪ್ತಮಾಧಿಪತಿ ಗುರು ಮಾರಕರು, ಭಾಗ್ಯಾಧಿಪತಿ ಶುಕ್ರನು ಶುಭಫಲ ವನ್ನು ನೀಡುತ್ತಾನೆ. ಬುಧ-ಶುಕ್ರಯುತಿಯು ಯೋಗಕಾರಕ ಆಗಿರುತ್ತದೆ. ವ್ಯಯಾಧಿಪ ರವಿ, ಷಷ್ಠಾಧಿಪ ಶನಿ, ಲಗ್ನ-ಕರ್ಮಾಧಿಪ ಬುಧ ಮಿಶ್ರಫಲ ದಾಯಕರು ಆಗಿರುತ್ತಾರೆ.

7. ತುಲಾಲಗ್ನ ದವರಿಗೆ ತೃತೀಯ-ಷಷ್ಠಾಧಿಪತಿ ಗುರು, ಲಾಭಾಧಿಪತಿ ರವಿ ಮತ್ತು ದ್ವಿತೀಯ ಸಪ್ತಮಾಧಿಪತಿ ಕುಜನು ಪಾಪಫಲವನ್ನು ನೀಡುತ್ತಾರೆ. ಕುಜನು ಮಾರಕಾಧಿಪತಿ, ಗುರು, ರವಿಗಳು ಪಾಪ ಸಂಬಂಧದಲ್ಲಿ ಇದ್ದರೆ ಮಾರಕರು ಆಗುತ್ತಾರೆ. ಚಂದ್ರನು ಕೇಂದ್ರಾಧಿಪತ್ಯ ದೋಷ ಇರುವುದರಿಂದ ಮಧ್ಯಮಫಲದಾಯಕನು, ಪಂಚಮಾಧಿಪತಿ ಶನಿ, ಲಗ್ನಾಧಿಪ ಶುಕ್ರ ಮತ್ತು ಭಾಗ್ಯಾಧಿಪ ಬುಧನು ಶುಭಫಲ ನೀಡುತ್ತಾರೆ. ಕೇಂದ್ರ, ತ್ರಿಕೋಣಾಧಿಪತಿ ಶನಿಯು ಯೋಗಕಾರಕನು ಆಗುತ್ತಾನೆ. ಭಾಗ್ಯಾಧಿಪ ಬುಧ ಮತ್ತು ಕರ್ಮಾಧಿಪ ಚಂದ್ರನ ಯುತಿ ಯೋಗಕಾರಕ ಆಗಿರುತ್ತದೆ.

8. ವೃಶ್ಚಿಕಲಗ್ನ ದವರಿಗೆ ಅಷ್ಟಮ ಲಾಭಾಧಿಪತಿ ಬುಧನು, ತೃತೀಯಾಧಿಪತಿ ಶನಿ, ವ್ಯಯಾಧಿಪತಿ ಶುಕ್ರನು ಪಾಪಫಲ ನೀಡುತ್ತಾರೆ. ಬುಧ-

ಶುಕ್ರರು ಮಾರಕಾಧಿಪತಿಗಳು ಆಗಿರುತ್ತಾರೆ. ಶನಿ-ಬುಧರ ಪಾಪ ಸಂಪರ್ಕ ವಿದ್ದರೆ, ದ್ವಿತೀಯಾಧಿಪ ಗುರುವು ಮಾರಕಾಧಿಪತಿ ಆಗುತ್ತಾನೆ. ಭಾಗ್ಯಾಧಿಪ ಚಂದ್ರ, ಪಂಚಮಾಧಿಪ ಗುರು, ಶುಭಫಲದಾಯಕರು, ಸೂರ್ಯಚಂದ್ರರ ಯುತಿಯು ಇವರಿಗೆ ಯೋಗಕಾರಕ ಆಗಿರುತ್ತದೆ. ಕುಜನು ಲಗ್ನಾಧಿಪತಿ ಯಾದರೂ ಷಷ್ಠಾಧಿಪತಿಯಾದ್ದರಿಂದ, ಮಿಶ್ರಫಲದಾಯಕನು ಆಗಿರುತ್ತಾನೆ.

9. ಧನುರ್ಲಗ್ನದಲ್ಲಿ ಜನಿಸಿದವರಿಗೆ ಷಷ್ಠಲಾಭಾಧಿಪತಿ ಶುಕ್ರನು ಪಾಪಫಲವನ್ನು ನೀಡುತ್ತಾನೆ. ಧನ-ತೃತೀಯಾಧಿಪತಿ ಶನಿ, ಷಷ್ಠಲಾಭಾಧಿಪತಿ ಶುಕ್ರ, ಮಾರಕರು, ಭಾಗ್ಯಾಧಿಪತಿ ರವಿ, ಪಂಚಮಾಧಿಪತಿ ಕುಜ ಶುಭಫಲ ದಾಯಕನು, ರವಿ-ಬುಧರ ಯುತಿಯು ಯೋಗಕಾರಕ, ಅಷ್ಟಮಾಧಿಪತಿ ಚಂದ್ರನು ಮಿಶ್ರಫಲದಾಯಕನು ಆಗಿರುತ್ತಾನೆ.

10. ಮಕರಲಗ್ನದಲ್ಲಿ ಜನಿಸಿದವರಿಗೆ ತೃತೀಯ, ವ್ಯಯಾಧಿಪತಿ ಗುರು, ಲಾಭಾಧಿಪತಿ ಕುಜ, ಸಪ್ತಮಾಧಿಪತಿ ಚಂದ್ರನು ಪಾಪಫಲ ನೀಡುತ್ತಾರೆ, ಗುರು ಕುಜರು ಮಾರಕರು, ಪಂಚಮಾಧಿಪತಿ ಶುಕ್ರ, ಭಾಗ್ಯಾಧಿಪ ಬುಧ ಶುಭಫಲ ನೀಡುತ್ತಾರೆ. ಕೇಂದ್ರ ತ್ರಿಕೋಣಾಧಿಪ ಶುಕ್ರನು ಯೋಗಕಾರಕನು, ಲಗ್ನ-ದ್ವಿತೀಯಾಧಿಪ ಶನಿ ಮತ್ತು ಅಷ್ಟಮಾಧಿಪರವಿ ಮಿಶ್ರಫಲದಾಯಕರಾಗುತ್ತಾರೆ.

11. ಕುಂಭಲಗ್ನದಲ್ಲಿ ಜನಿಸಿದವರಿಗೆ ಲಾಭಾಧಿಪ ಗುರು, ಷಷ್ಠಾಧಿಪ ಚಂದ್ರ ತೃತೀಯಾಧಿಪ ಕುಜನು ಪಾಪಫಲ ನೀಡುತ್ತಾರೆ. ಚತುರ್ಥ-ಭಾಗ್ಯಾಧಿಪ ಶುಕ್ರನು ಶುಭಫಲದಾಯಕನು. ಭಾಗ್ಯಾಧಿಪಶುಕ್ರ ಮತ್ತು ಚತುರ್ಥಾಧಿಪ ಕುಜನ ಯುತಿಯು ಯೋಗಕಾರಕ ಆಗಿರುತ್ತದೆ. ಗುರು ಚಂದ್ರ, ಕುಜರು ದೂಷಿತರಾದಾಗ ಮಾರಕರು ಆಗುತ್ತಾರೆ. ಸಪ್ತಮಾಧಿಪತಿ ರವಿ, ಲಗ್ನ, ವ್ಯಯಾಧಿಪ, ಶನಿಯು ಮಿಶ್ರಫಲದಾಯಕರು ಆಗುತ್ತಾರೆ.

12. ಮೀನಲಗ್ನದಲ್ಲಿ ಜನಿಸಿದವರಿಗೆ ಲಾಭ, ವ್ಯಯಾಧಿಪಶನಿ, ತೃತೀಯ, ಅಷ್ಟಮಾಧಿಪತಿ ಶುಕ್ರ, ಸಪ್ತಮಾಧಿಪತಿ ಬುಧ, ಷಷ್ಠಾಧಿಪ ರವಿ ಪಾಪಫಲ ನೀಡುತ್ತಾರೆ. ಶನಿ, ಶುಕ್ರ, ಬುಧರು ಮಾರಕರು ಆಗುತ್ತಾರೆ. ಪಂಚಮಾಧಿಪ ಶುಕ್ರ ಮತ್ತು ಭಾಗ್ಯಾಧಿಪ ಕುಜನು ಶುಭಫಲ ನೀಡುತ್ತಾರೆ. ಲಗ್ನಾಧಿಪ ಗುರು ಕೇಂದ್ರಾಧಿಪತ್ಯ ಇರುವುದರಿಂದ ಮಿಶ್ರಫಲದಾಯಕನು. ಕರ್ಮಾಧಿಪತಿ ಗುರು ಮತ್ತು ಭಾಗ್ಯಾಧಿಪತಿ ಕುಜನ ಯುತಿಯು ಯೋಗಕಾರಕ ಆಗುತ್ತದೆ.

# ೫೬. ಪ್ರಶ್ನ ಶಾಸ್ತ್ರ

ದಿನನಿತ್ಯದ ವ್ಯವಹಾರದಲ್ಲಿ ಬರುವ ತಾತ್ಕಾಲಿಕ ಸಮಸ್ಯೆಗಳ ಪರಿಹಾರ ವನ್ನು ತಿಳಿಯಲು ಪ್ರಶ್ನಶಾಸ್ತ್ರದಲ್ಲಿ ಹೇಳಿದ ವಿಧಾನಗಳು ಉತ್ತಮ ಮಾರ್ಗ ದರ್ಶಕ ಆಗಿರುತ್ತದೆ. ಆರೋಗ್ಯ, ಧನ-ಸಂಪತ್ತು, ಭೂ-ವಿವಾದ, ಗೃಹವಿಚಾರ, ಸಂತಾನಚಿಂತೆ, ವಿವಾಹಕಾಲ, ಶತ್ರುಪೀಡೆ, ಕರ್ಮ ವಿಚಾರ, ನಷ್ಟ ವಸ್ತು, ಪ್ರಯಾಣ ಇತ್ಯಾದಿ ಹಲವಾರು ತಾತ್ಕಾಲಿಕ ಸಮಸ್ಯೆಗಳ ಪರಿಹಾರವನ್ನು ಪ್ರಶ್ನ ಶಾಸ್ತ್ರದಿಂದ ತಿಳಿಯಬಹುದು.

ಪ್ರಶ್ನೆಯ ಫಲಿತಾಂಶವನ್ನು ನಿರ್ಣಯಿಸಲು ಜ್ಯೋತಿಷ್ಕರು ಸಾಮಾನ್ಯ ವಾಗಿ ಎರಡು ವಿಧಾನಗಳನ್ನು ಅನುಸರಿಸುತ್ತಾರೆ.

(1) ಪೃಚ್ಛಕನು ತನ್ನ ತಾತ್ಕಾಲಿಕ ಸಮಸ್ಯೆಯ ವಿಚಾರ, ಪ್ರಶ್ನೆಯನ್ನು ಕೇಳಿದ ಕಾಲದ ಲಗ್ನ ಮತ್ತು ಗ್ರಹಸ್ಥಿತಿಯಿಂದ ಹಾಗೂ ಆ ಕಾಲದ ಶುಭಾಶುಭ ಶಕುನಗಳನ್ನು ಆಧರಿಸಿ ಫಲ ನಿರ್ಣಯಿಸುತ್ತಾರೆ.

(2) ಜ್ಯೋತಿಷ್ಕರು ಒಂದು ಮಣೆಯ ಮೇಲೆ ಬಲಭಾಗದಲ್ಲಿ ರಾಶಿಚಕ್ರ ವನ್ನು ಬರೆದು ತಾತ್ಕಾಲಿಕ ಗ್ರಹಸ್ಥಿತಿಯನ್ನು ಕವಡೆಗಳಿಂದ ಗುರುತಿಸಿ ಇಡುತ್ತಾರೆ. ಎಡಭಾಗದಲ್ಲಿ ನೂರೆಂಟು ಕವಡೆಗಳನ್ನು ಇಟ್ಟು ಪೃಚ್ಛಕನ ನಾಮ ಮತ್ತು ಜನ್ಮನಕ್ಷತ್ರವನ್ನು ತಿಳಿದು ನವಗ್ರಹರನ್ನು ಮತ್ತು ಇಷ್ಟ ದೇವತೆಯನ್ನು ಪ್ರಾರ್ಥಿಸುತ್ತಾ, ಕವಡೆಗಳನ್ನು ತಿರುಗಿಸಿ ಅದರಿಂದ ಒಂದು ಮುಷ್ಟಿ ಕವಡೆ ಗಳನ್ನು ಬೇರ್ಪಡಿಸಿ ಲೆಕ್ಕಹಾಕಿ, ಹದಿನೆರಡಕ್ಕಿಂತ ಜಾಸ್ತಿ ಇದ್ದರೆ, ಹದಿನೆರಡನ್ನು ಕಳೆದು, ಶೇಷ ಕವಡೆಯ ಸಂಖ್ಯೆಯನ್ನು ಪ್ರಶ್ನಲಗ್ನವೆಂದು ಆಧರಿಸಿ, ತಾತ್ಕಾಲಿಕ ಗ್ರಹಸ್ಥಿತಿಯಿಂದ ಪ್ರಶ್ನೆಯ ಫಲಾಫಲವನ್ನು ತಿಳಿಸುತ್ತಾರೆ.

ಸಾಮಾನ್ಯವಾಗಿ ಪ್ರಶ್ನಕಾಲದ ಲಗ್ನ ಲಗ್ನಾಧಿಪತಿ ಬಲಿಷ್ಠನಾಗಿ ಕೇಂದ್ರ ತ್ರಿಕೋಣಗತನಾಗಿ ಇರುವುದು ಶುಭವನ್ನು ಸೂಚಿಸುತ್ತದೆ. ಗುರುವು ಪ್ರಶ್ನ ಲಗ್ನವನ್ನು ನೋಡುವುದು ಅಥವಾ ಕೇಂದ್ರ ತ್ರಿಕೋನಗಳಲ್ಲಿ ಇದ್ದರೆ ಪೃಚ್ಛಕನಿಗೆ ದೈವಬಲವು ಇರುವುದರಿಂದ ಅವನ ಇಷ್ಟಾರ್ಥವು ಫಲಿಸುತ್ತದೆ. ಪ್ರಶ್ನಶಾಸ್ತ್ರದ ವಿಷಯ ನಮ್ಮ ಗುರುಗಳಾದ ವೈದ್ಯಗುರು ಎಂ. ಆರ್. ಭಟ್‌ರವರು ಪ್ರಕಾಶಿಸಿದ ಹೋರಾಕೃಷ್ಣಿಯ ಮತ್ತು ವಂಪ್ರಶ್ನದೀಪ ಎಂಬ ಗ್ರಂಥಗಳು ಉಪಯುಕ್ತ ಆಗಿರುತ್ತದೆ.

## ೫೭. ಆತ್ಮಕಾರಕ ಗ್ರಹ

ಜನನಕಾಲದ ಸೂರ್ಯಾದಿ ಸಪ್ತಗ್ರಹರು ಮತ್ತು ರಾಹುವನ್ನು ಸೇರಿಸಿ, ಎಂಟು ಗ್ರಹರಲ್ಲಿ, ತಾನುಸ್ಥಿತ ರಾಶಿಯಲ್ಲಿ ಅಧಿಕಭಾಗ, ಕಲೆ ಮತ್ತು ವಿಕಲೆಗಳನ್ನು ದಾಟಿದ ಗ್ರಹನನ್ನು ಆತ್ಮಕಾರಕನು ಎಂದು ಕರೆಯುತ್ತಾರೆ.

ರಾಶಿಯಲ್ಲಿ ಅತ್ಯಧಿಕ ಭಾಗಾದಿ (ಭಾಗ, ಕಲೆ, ವಿಕಲೆಗಳಲ್ಲಿ ಮುಂದುವರೆದ ಗ್ರಹನು 1. ಆತ್ಮಕಾರಕನು, ಅನಂತರ ಮುಂದುವರೆದ ಗ್ರಹರಲ್ಲಿ ಕ್ರಮವಾಗಿ 2. ಅಮಾತ್ಯಕಾರಕ, 3. ಭ್ರಾತೃಕಾರಕ, 4. ಮಾತೃಕಾರಕ, 5. ಪಿತೃಕಾರಕ, 6. ಪುತ್ರಕಾರಕ, 7. ಜ್ಞಾತಿಕಾರಕ ಮತ್ತು 8. ಪತ್ನಿಕಾರಕನು ಆಗುತ್ತಾನೆ. ರಾಹುವು ವಿರುದ್ಧ ದಿಕ್ಕಿನಲ್ಲಿ ಚಲಿಸುವುದರಿಂದ ರಾಹುಸ್ಫುಟವನ್ನು 30ಭಾಗಗಳಿಂದ ಕಳೆದು ಬಂದ ಸ್ಫುಟವನ್ನು ಗಣನೆಗೆ ತೆಗೆದುಕೊಳ್ಳಬೇಕು.

1. ಅಮಾತ್ಯಕಾರಕಾದಿ ಗ್ರಹರು ಆತ್ಮಕಾರಕ ಗ್ರಹನ ಅಧೀನದಲ್ಲಿ ಇರುತ್ತಾರೆ. 2. ಆತ್ಮಕಾರಕ ಗ್ರಹನು ಪ್ರತಿಕೂಲನಾದಾಗ ಅಮಾತ್ಯಕಾರಕಾದಿ ಗ್ರಹರು ತಾವು ನೀಡಬೇಕಾದ ಶುಭಫಲಗಳನ್ನು ಪೂರ್ಣವಾಗಿ ನೀಡಲು ಅಸಮರ್ಥರು ಆಗುತ್ತಾರೆ. 3. ಆತ್ಮಕಾರಕ ಗ್ರಹನು ಅನುಕೂಲನಾದಾಗ ಅಮಾತ್ಯಕಾರಕಾದಿ ಗ್ರಹರು ಅಶುಭಫಲವನ್ನು ನೀಡುವುದಿಲ್ಲ.

ಆತ್ಮಕಾರಕನು ಸಕಲಗ್ರಹರಿಗೆ ಒಡೆಯನು ಹಾಗೂ ಅವನ ಪ್ರಭಾವವು ಜಾತಕನ ಮೇಲೆ ಅಧಿಕವಾಗಿರುತ್ತದೆ, ಹಾಗೂ ಸಕಲ ಸಂಕಷ್ಟಗಳನ್ನು ನಾಶಮಾಡಿ, ಜಾತಕನ ಅಭ್ಯುದಯಕ್ಕೆ ಕಾರಣೀಭೂತನು ಆಗುತ್ತಾನೆ.

ಆತ್ಮಕಾರಕನನ್ನು ಶುಭಗ್ರಹರು ನೋಡಿದರೆ ಅಶುಭಫಲಗಳು ಸಂಭವಿಸುವುದಿಲ್ಲ. ಪಾಪಗ್ರಹರು ನೋಡಿದರೆ ಶುಭಫಲಗಳು ಸಂಭವಿಸುವುದಿಲ್ಲ.

## ೫೮. ಆರೂಢ ಅಥವಾ ಪದ

ಲಗ್ನದಿಂದ ಲಗ್ನಾಧಿಪತಿಯು ಎಷ್ಟುರಾಶಿ ದೂರ ಇರುವನೋ ಅಲ್ಲಿಂದ ಅಷ್ಟೇ ದೂರ ಇರುವ ರಾಶಿಯನ್ನು ಲಗ್ನಪದ ಅಥವಾ ಲಗ್ನಾರೂಢ ರಾಶಿಯೆಂದು ಕರೆಯುತ್ತಾರೆ.

ಲಗ್ನಾರೂಢದಿಂದ ಲಾಭದಲ್ಲಿ ಗ್ರಹರ ಯೋಗ ಅಥವಾ ದೃಷ್ಟಿ ಇದ್ದರೆ ಜಾತಕನು ಧನವಂತನು, ಸುಖವಂತನು ಆಗುತ್ತಾನೆ. ಶುಭಗ್ರಹಯೋಗವಾದರೆ ನೀತಿಯಿಂದ, ಅಶುಭಗ್ರಹ ಯೋಗವಾದರೆ ಅನೀತಿಯ ಮಾರ್ಗದಿಂದ ಲಾಭವನ್ನು ಗಳಿಸುತ್ತಾನೆ.

# ೫೯. ಸಂವತ್ಸರ ಫಲ

60 ಸಂವತ್ಸರಗಳು. 1) ಪ್ರಭವ 2) ವಿಭವ 3) ಶುಕ್ಲ 4) ಪ್ರಮೋದ 5) ಪ್ರಜಾಪತಿ 6) ಆಂಗೀರಸ 7) ಶ್ರೀಮುಖ 8) ಭಾವ 9) ಯುವ 10) ಧಾತೃ 11) ಈಶ್ವರ 12) ಬಹುಧಾನ್ಯ 13) ಪ್ರಮಾಥೀ 14) ವಿಕ್ರಮ 15) ವೃಷ 16) ಚಿತ್ರಭಾನು 17) ಸುಭಾನು 18) ತಾರಣ 19) ಪಾರ್ಥಿವ 20) ವ್ಯಯ 21) ಸರ್ವಜಿತ್ 22) ಸರ್ವಧಾರೀ 23) ವಿರೋಧೀ 24) ವಿಕೃತಿ 25) ಖರ 26) ನಂದನ 27) ವಿಜಯ 28) ಜಯ 29) ಮನ್ಮಥ 30) ದುರ್ಮುಖ 31) ಹೇಮಲಂಬ 32) ವಿಲಂಬ 33) ವಿಕಾರಿ 34) ಶಾರ್ವರೀ 45) ಪ್ಲವ 36) ಶುಭಕೃತ್ 37) ಶೋಭಕೃತ್ 37) ಕ್ರೋಧೀ 39) ವಿಶ್ವಾವಸು 40) ಪರಾಭವ 41) ಪ್ಲವಂಗ 42) ಕೀಲಕ 43) ಸೌಮ್ಯ 44) ಸಾಧಾರಣ 45) ವಿರೋಧಕೃತ್ 46) ಪರಿಧಾವೀ 47) ಪ್ರಮಾದಿ 48) ಆನಂದ 49) ರಾಕ್ಷಸ 50) ನಲ 51) ಪಿಂಗಲ 52) ಕಾಲಯುಕ್ತ 53) ಸಿದ್ಧಾರ್ಥೀ 54) ರೌದ್ರ 55) ದುರ್ಮತೀ 56) ದುಂದುಭಿ 57) ರುಧಿರೋದ್ಗಾರಿ 58) ರಕ್ತಾಕ್ಷಿ 59) ಕ್ರೋಧನ 60) ಕ್ಷಯ.

**1. ಪ್ರಭವ:** ಪ್ರಭವ ಸಂವತ್ಸರದಲ್ಲಿ ಜನಿಸಿದವನು ಸಾಹಸಕಾರ್ಯ ಗಳನ್ನು ಮಾಡುವವನು, ಸತ್ಯವಂತನು, ಸರ್ವಗುಣ ಸಂಪನ್ನನು, ಕಲಾವಿದನು, ಧರ್ಮಪರಾಯಣನು ಆಗುತ್ತಾನೆ.

**2. ವಿಭವ:** ವಿಭವ ಸಂವತ್ಸರದಲ್ಲಿ ಜನಿಸಿದವನು ವಿಷಯಾಸಕ್ತಿ ಉಳ್ಳ ವನು, ಶುಚಿರ್ಭೂತನು, ಸದಾಸಂತುಷ್ಟನು, ಬಲಿಷ್ಠನು, ಧನವಂತನು, ಬಂಧು ಬಾಂಧವರು ಉಳ್ಳವನು, ವಿದ್ಯಾವಂತನು, ಯಶಸ್ವಿಯೂ ಆಗುತ್ತಾನೆ.

**3. ಶುಕ್ಲ:** ಶುಕ್ಲ ಸಂವತ್ಸರದಲ್ಲಿ ಜನಿಸಿದವನು ಪರಸ್ತ್ರೀರತನು, ಶಕ್ತಿ ಯನ್ನು ಕಳೆಕೊಂಡವನು ತ್ಯಾಗವಂತನು. ಜ್ಞಾನನೂ ಆಗುತ್ತಾನೆ.

**4. ಪ್ರಮೋದ :** ಪ್ರಮೋದ ಸಂವತ್ಸರದಲ್ಲಿ ಜನಿಸಿದವನು ಮಾಂತ್ರಿಯು, ಕರ್ಮಪರಾಯಣನು, ವಾಕ್ಪಟುತ್ವಉಳ್ಳವನು, ಆಗುತ್ತಾನೆ.

5. **ಪ್ರಜಾಪತಿ:** ಪ್ರಜಾಪತಿ ಸಂವತ್ಸರದಲ್ಲಿ ಜನಿಸಿದವನು ಧಾರ್ಮಿಕ ಪ್ರವೃತ್ತಿ ಉಳ್ಳವನು. ದಾನ ಪರಾಯಣನು, ಪುತ್ರ, ಧನ ಉಳ್ಳವನು. ಶಾಂತ ಚಿತ್ತನು ಆಗುತ್ತಾನೆ.

6. **ಆಂಗೀರಸ:** (ಅಂಗೀರಾ)ಆಂಗೀರಸ ಸಂವತ್ಸರದಲ್ಲಿ ಜನಿಸಿದವನು, ನೀತಿ ವಂತನು, ಬುದ್ಧಿವಂತನು, ನಿಪುಣನು, ದಯಾಪರನು, ಧನವಂತನು ಆಗುತ್ತಾನೆ.

7. **ಶ್ರೀಮುಖ:** ಶ್ರೀಮುಖ ಸಂವತ್ಸರದಲ್ಲಿ ಜನಿಸಿದವನು ಪರದಾರ ರತನು, ಶುಚಿರ್ಭೂತನು, ನ್ಯಾಯವಂತನು, ಸಂಪತ್ತು ಉಳ್ಳವನು ಆಗುತ್ತಾನೆ.

8. **ಭಾವ:** ಭಾವ ಸಂವತ್ಸರದಲ್ಲಿ ಜನಿಸಿದವನು ಯೋಗಿಯು. ಅಧಿಕಾರ ಉಳ್ಳವನು. ಬಲಿಷ್ಠನು. ಪ್ರಖ್ಯಾತನು ಆಗುತ್ತಾನೆ.

9. **ಯುವ:** (ಯುವಾ) ಯುವ ಸಂವತ್ಸರದಲ್ಲಿ ಜನಿಸಿದವನು ಆಶೆ ಉಳ್ಳವನು. ಲೋಭಿಯು, ಚಂಚಲಚಿತ್ತನು, ಕೃಶವಾದ ಶರೀರ ಉಳ್ಳವನು. ಕ್ರೋಧ ಉಳ್ಳವನು. ವೈದ್ಯನು ಆಗುತ್ತಾನೆ.

10. **ಧಾತೃ:** (ಧಾತಾ) ಧಾತೃ ಸಂವಸ್ಸರದಲ್ಲಿ ಜನಿಸಿದವನು ಪರದಾ ರರತನು, ಕೈಕೊಂಡ ಕಾರ್ಯಗಳನ್ನು ಹಠದಿಂದ ಸಾಧಿಸುವವನು. ಮೋಸ ಗಾರನು, ಧೂರ್ತನು. ದೀರ್ಘಾಯುವು, ಭಾಗ್ಯವಂತನು. ನಿಪುಣನು, ಶಾಸ್ತ್ರ ಗಳನ್ನು ಬಲ್ಲವನು, ರೂಪವಂತನು, ವೈದ್ಯನು ಆಗುತ್ತಾನೆ.

11. **ಈಶ್ವರ:** ಈಶ್ವರ ಸಂವತ್ಸರದಲ್ಲಿ ಜನಿಸಿದವನು ಸಂಪತ್ತು, ಧನ ಉಳ್ಳವನು. ಮಾನಿಸಲ್ಪಡುವವನು, ಧೃಢಮತಿಯು, ಗುಣಾವಗುಣಗಳನ್ನು ಗ್ರಹಿಸುವವನು, ಸರ್ವಜ್ಞನು, ಸುಂದರನು, ಕ್ರೋಧ ಉಳ್ಳವನು ಆಗುತ್ತಾನೆ.

12. **ಬಹುಧಾನ್ಯ:** ಬಹುಧಾನ್ಯ ಸಂವತ್ಸರದಲ್ಲಿ ಜನಿಸಿದವನು ಸತ್ಕಾರ್ಯಗಳನ್ನು ಮಾಡುವವನು, ಭೋಗವಂತನು, ವ್ಯಾಪಾರಿಯು. ಧನವಂತನು, ದಾನಿಯು ಆಗುತ್ತಾನೆ.

13. **ಪ್ರಮಾಥೀ:** ಪ್ರಮಾಥೀ ಸಂವತ್ಸರದಲ್ಲಿ ಜನಿಸಿದವನು ಕ್ರೂರ ಸ್ವಭಾವದವನು, ಪಾಪಕರ್ಮನಿರತನು, ಕ್ರೋಧ ಉಳ್ಳವನು. ಬಂಧುಗಳನ್ನು ಕಳಕೊಂಡವನು, ಸುಖವಂತನು, ಅಧಿಕಾರ ಉಳ್ಳವನು ಆಗುತ್ತಾನೆ.

14. ವಿಕ್ರಮ : ವಿಕ್ರಮ ಸಂವತ್ಸರದಲ್ಲಿ ಜನಿಸಿದವನು ಶೂರನು, ದಂಡನಾಯಕನು, ಧನವಂತನು, ಉಗ್ರನು, ಪ್ರತಾಪವಂತನು, ಪಾಪಕರ್ಮ ನಿರತನು ಆಗುತ್ತಾನೆ.

15. ವೃಷ : ವೃಷ ಸಂವತ್ಸರದಲ್ಲಿ ಜನಿಸಿದವನು ಮಂದಮತಿಯು, ಆಲಸಿಯು, ಭಾರವಾದ ಕೆಲಸಗಳನ್ನು ಮಾಡುವವನು, ಧನರಹಿತನು, ನಿರ್ಲಜ್ಜನು ಆಗುತ್ತಾನೆ.

16. ಚಿತ್ರಭಾನು: ಚಿತ್ರಭಾನು ಸಂವತ್ಸರದಲ್ಲಿ ಜನಿಸಿದವನು ವಿದ್ಯಾವಂತನು, ಧನವಂತನು, ನೀತಿವಂತನು, ದೃಢನಿಶ್ಚಯ ಉಳ್ಳವನು, ಸಿಹಿಯಾದ ಮಾತುಗಳನ್ನು ಆಡುವವನು, ರೂಪವಂತನು, ತೇಜಸ್ವಿಯು ಆಗುತ್ತಾನೆ.

17. ಸುಭಾನು: ಸುಭಾನು ಸಂವತ್ಸರದಲ್ಲಿ ಜನಿಸಿದವನು ನಾಯಕನು, ವಿದ್ಯಾವಂತನು, ತನ್ನ ಕುಲಧರ್ಮದಂತೆ ನಡೆಯುವವನು ಆಗುತ್ತಾನೆ.

18. ತಾರಣ: ತಾರಣ ಸಂವತ್ಸರದಲ್ಲಿ ಜನಿಸಿದವನು ವಿವೇಕವಂತನು, ಬಲಿಷ್ಠನು, ಧನಾಢ್ಯನು, ಚಂಚಲನು ಆಗುತ್ತಾನೆ.

19. ಪಾರ್ಥಿವ : ಪಾರ್ಥಿವ ಸಂವತ್ಸರದಲ್ಲಿ ಜನಿಸಿದವನು ಜನ ನಾಯಕನು, ಶ್ರೀಮಂತನು, ಸುಖವಂತನು, ಮೃದುವಾದ ಮಾತುಗಳು ಉಳ್ಳವನು, ರಾಜರಿಂದ ಪೂಜಿಸಲ್ಪಡುವವನು, ಲಕ್ಷಣವಂತನು ಆಗುತ್ತಾನೆ.

20. ವ್ಯಯ : ವ್ಯಯ ಸಂವತ್ಸರದಲ್ಲಿ ಜನಿಸಿದವನು ವಿಷಯಾಸಕ್ತಿ ಉಳ್ಳವನು, ಭಯ ಉಳ್ಳವನು, ಕೆಟ್ಟಗುಣ ಉಳ್ಳವನು, ಪಾಪಕರ್ಮನಿರತನು, ಜೂಜಾಡುವವನು, ಮದ್ಯಪಾನ ಮಾಡುವವನು ಆಗುತ್ತಾನೆ.

21. ಸರ್ವಜಿತು: ಸರ್ವಜಿತು ಸಂವತ್ಸರದಲ್ಲಿ ಜನಿಸಿದವನು ವಾಕ್ಪಟುತ್ವ ಉಳ್ಳವನು, ಬಲಿಷ್ಠನು, ಶಾಸ್ತ್ರಗಳನ್ನು ಬಲ್ಲವನು ಗುಣವಂತನು, ತಾರ್ಕಿಕನು ಆಗುತ್ತಾನೆ.

22. ಸರ್ವಧಾರಿ: ಸರ್ವಧಾರಿ ಸಂವತ್ಸರದಲ್ಲಿ ಜನಿಸಿದವನು ಸಂಪತ್ತು ಉಳ್ಳವನು, ಧನ, ಸುಖ, ಭೃತ್ಯರು ಉಳ್ಳವನು, ಕಲಾಕಾರನು, ರಾಜಪ್ರಿಯನು ಆಗುತ್ತಾನೆ.

23. ವಿರೋಧಿ: ವಿರೋಧಿ ಸಂವತ್ಸರದಲ್ಲಿ ಜನಿಸಿದವನು ಶೋಕ ಉಳ್ಳವನು, ದುಷ್ಕರ್ಮಗಳನ್ನು ಮಾಡುವವನು, ಕ್ರೂರನು, ಕುಟುಂಬಕಲಹ ಉಳ್ಳವನು, ಅನ್ಯದಾರರತನು ಆಗುತ್ತಾನೆ.

24. ವಿಕೃತಿ: ವಿಕೃತಿ ಸಂವತ್ಸರದಲ್ಲಿ ಜನಿಸಿದವನು ಮಾಯಾವಿ, ವಿಷಯಾತುರನು, ಮಂತ್ರ-ತಂತ್ರಗಳನ್ನು ಬಲ್ಲವನು, ಕಪಟಉಳ್ಳವನು ಆಗುತ್ತಾನೆ

25. ಖರ: ಖರ ಸಂವತ್ಸರದಲ್ಲಿ ಜನಿಸಿದವನು ಮಲಿನನು, ನಿರ್ಗುಣನು, ದೀರ್ಘಾಯುವು, ಪಾಪಕಾರ್ಯನಿರತನು, ದುಷ್ಟನು ಆಗುತ್ತಾನೆ.

26. ನಂದನ: ನಂದನ ಸಂವತ್ಸರದಲ್ಲಿ ಜನಿಸಿದವನು ಆನಂದ ಸ್ವರೂಪನು, ರಾಜಪ್ರಿಯನು, ಮಂತ್ರಶಾಸ್ತ್ರ ಬಲ್ಲವನು, ಸಂತುಷ್ಟನು, ಶೀಲ ವಂತನು ಆಗುತ್ತಾನೆ.

27. ವಿಜಯ: ವಿಜಯ ಸಂವತ್ಸರದಲ್ಲಿ ಜನಿಸಿದವನು ಧಾರ್ಮಿಕನು, ಸತ್ಯವಂತನು, ಸಂಪತ್ತು ಉಳ್ಳವನು, ಶೂರನು, ಯಶೋವಂತನು, ಭೋಗ ವಂತನು ಆಗುತ್ತಾನೆ.

28. ಜಯ: ಜಯ ಸಂವತ್ಸರದಲ್ಲಿ ಜನಿಸಿದವನು ರಾಜತುಲ್ಯನು, ಅಥವಾ ರಾಜನು, ವಿದ್ಯಾವಂತನು, ಮಾನವಂತನು, ಶಾಸ್ತ್ರಗಳನ್ನು ಬಲ್ಲವನು ಆಗುತ್ತಾನೆ.

29. ಮನ್ಮಥ: ಮನ್ಮಥ ಸಂವತ್ಸರದಲ್ಲಿ ಜನಿಸಿದವನು ವಿಷಯಾ ಸಕ್ತಿ ಉಳ್ಳವನು, ಶತ್ರುಗಳನ್ನು ಜಯಿಸಿದವನು, ಭೋಗವಂತನು, ಪ್ರಿಯವಾದ ಮಾತುಗಳನ್ನು ಆಡುವವನು ಆಗುತ್ತಾನೆ.

30. ದುರ್ಮುಖ: (ದುರ್ಮುಖಿ) ಸಂವತ್ಸರದಲ್ಲಿ ಜನಿಸಿದವನು ಗುಣ ರಹಿತನು, ಧನವಿಲ್ಲದವನು, ಹಟವಂತನು, ಕ್ರೂರಮತಿ ಉಳ್ಳವನು, ನಿರ್ಲಜ್ಜನು ಆಗುತ್ತಾನೆ.

31. ಹೇಮಲಂಬ: (ಹೇಮಲಂಬಿ) ಸಂವತ್ಸರದಲ್ಲಿ ಜನಿಸಿದವನು ದುಷ್ಟನು, ಕೃಷೀವಲನು, ಕಾಯಕಷ್ಟಗಳನ್ನು ಮಾಡುವವನು, ಧನಧಾನ್ಯ, ಪಶು, ವಸ್ತ್ರಾದಿ ಉಳ್ಳವನು, ಸುಖವಂತನು ಆಗುತ್ತಾನೆ.

**32. ವಿಲಂಬ :** ವಿಲಂಬ (ವಿಲಂಬಿ) ಸಂವತ್ಸರದಲ್ಲಿ ಜನಿಸಿದವನು ಶ್ರೀಮಂತನು, ಫಲಾಪೇಕ್ಷೆ ಇಲ್ಲದವನು, ಆಲಸಿಯು ಆಗುತ್ತಾನೆ.

**33. ವಿಕಾರಿ :** ಸಂವತ್ಸರದಲ್ಲಿ ಜನಿಸಿದವನು ಅವಿವೇಕಿ, ಗರ್ವ ಉಳ್ಳವನು, ಗುಣರಹಿತನು, ದುಷ್ಟನು, ವಂಚಕನು, ರೋಗಿಯು, ಭಯಉಳ್ಳವನು, ಚಪಲನು, ಧನ ಉಳ್ಳವನು ಆಗುತ್ತಾನೆ.

**34. ಶಾರ್ವರೀ :** ಶಾರ್ವರೀ ಸಂವತ್ಸರದಲ್ಲಿ ಜನಿಸಿದವನು ಬುದ್ಧಿವಂತನು, ಧನವಂತನು, ಸುಖ, ಭೋಗ ಉಳ್ಳವನು, ಸದ್ಗುಣನು, ಸತ್ಯವಂತನು, ಸತ್ಕಾರ್ಯಮಾಡುವವನು, ಆಗುತ್ತಾನೆ.

**35. ಪ್ಲವ :** ಪ್ಲವ ಸಂವತ್ಸರದಲ್ಲಿ ಜನಿಸಿದವನು ಉದಾರನು, ಪ್ರಶಾಂತನು, ದಯಾಳು, ಶೂರನು, ಧರ್ಮಪರಾಯಣನು ಆಗುತ್ತಾನೆ.

**36. ಶುಭಕೃತು:** (ಶುಭಕೃತ್) ಶುಭಕೃತು ಸಂವತ್ಸರದಲ್ಲಿ ಜನಿಸಿದವನು ಸೌಭಾಗ್ಯವಂತನು, ವಂಚಕನು, ಮೇಧಾವಿ, ಸುಂದರನು, ಬುದ್ಧಿವಂತನು, ಮತ್ತು ದೀರ್ಘಾಯುವು ಆಗುತ್ತಾನೆ.

**37. ಶೋಭಕೃತು :** ಶೋಭಕೃತು ಸಂವತ್ಸರದಲ್ಲಿ ಜನಿಸಿದವನು ಜ್ಞಾನವಂತನು, ಭೂಪತಿ, ಗುಣವಂತನು, ವಿದ್ಯಾವಂತನು, ಹಾಸ್ಯಜ್ಞನು, ಕೃಪಾಲುವು ಆಗುತ್ತಾನೆ.

**38. ಕ್ರೋಧೀ:** ಕ್ರೋಧೀ ಸಂವತ್ಸರದಲ್ಲಿ ಜನಿಸಿದವನು ದುರಾಚಾರ ಉಳ್ಳವನು, ಹಟವಾದಿ, ಅನ್ಯದಾರರತನು, ಕೋಪ ಉಳ್ಳವನು ಆಗುತ್ತಾನೆ.

**39. ವಿಶ್ವಾವಸು :** ವಿಶ್ವಾವಸು ಸಂವತ್ಸರದಲ್ಲಿ ಜನಿಸಿದವನು ಮಾನವಂತನು, ಹಾಸ್ಯಜ್ಞನು, ಗುಣವಂತನು, ಧನಿಕನು, ಸುಖವಂತನು, ಹೊಗಳಲ್ಪಡುವವನು ಆಗುತ್ತಾನೆ.

**40. ಪರಾಭವ:** ಪರಾಭವ ಸಂವತ್ಸರದಲ್ಲಿ ಜನಿಸಿದವನು ದುಷ್ಟಗುಣ ಉಳ್ಳವನು, ಧನಸಂಪತ್ತು ರಹಿತನು, ಕುಟುಂಬಕಲಹ ಉಳ್ಳವನು ಆಗುತ್ತಾನೆ.

**41. ಪ್ಲವಂಗ :** ಪ್ಲವಂಗ ಸಂವತ್ಸರದಲ್ಲಿ ಜನಿಸಿದವನು ಕಾಮಿಯು, ಬಂಧುಬಾಂಧವರಲ್ಲಿ ಪ್ರೀತಿ ಉಳ್ಳವನು, ಮಕ್ಕಳಲ್ಲಿ ಪ್ರೇಮ ಉಳ್ಳವನು, ಮಂದಬುದ್ಧಿಯವನು ಆಗುತ್ತಾನೆ,

42. ಕೀಲಕ : ಕೀಲಕ ಸಂವತ್ಸರದಲ್ಲಿ ಜನಿಸಿದವನು ದೇವತಾರಾಧನೆ ಯಲ್ಲಿ ಮಗ್ನನಾದವನು. ಅತಿಭಾಗ್ಯವಂತನು, ಶೌರ್ಯವಂತನು ಆಗುತ್ತಾನೆ.

43. ಸೌಮ್ಯ : ಸೌಮ್ಯ ಸಂವತ್ಸರದಲ್ಲಿ ಜನಿಸಿದವನು ಪ್ರಶಾಂತನು, ಸಾರ್ವಜನಿಕರಿಂದ ಹೊಗಳಲ್ಪಡುವವನು, ಹೆಚ್ಚು ಧನಉಳ್ಳವನು, ಧೈರ್ಯ ವಂತನು,. ಪಂಡಿತನು ಆಗುತ್ತಾನೆ.

44. ಸಾಧಾರಣ : ಸಾಧಾರಣ ಸಂವತ್ಸರದಲ್ಲಿ ಜನಿಸಿದವನು ವಿದ್ಯಾ ವಂತನು, ಕ್ರೋಧವಂತನು, ಪರದೇಶದಲ್ಲಿ ವಾಸಿಸುವವನು, ಹೀನಕಾರ್ಯ ಗಳನ್ನು ಮಾಡುವವನು ಆಗುತ್ತಾನೆ.

45. ವಿರೋಧಿಕೃತ್ : ವಿರೋಧಿಕೃತ್ ಸಂವತ್ಸರದಲ್ಲಿ ಜನಿಸಿದವು, ಆಶೆಉಳ್ಳವನು, ಕ್ರೋಧಉಳ್ಳವನು, ದರಿದ್ರನು ಪ್ರವಾಸಉಳ್ಳವನು ಆಗುತ್ತಾನೆ.

46. ಪರಿಧಾವಿ : ಪರಿಧಾವಿ ಸಂವತ್ಸರದಲ್ಲಿ ಜನಿಸಿದವನು, ದುರ್ಗುಣ ಉಳ್ಳವನು, ತೀಕ್ಷ್ಣವಾದ ಮಾತುಗಳನ್ನು ಆಡುವವನು, ಸಂಪತ್ತುಉಳ್ಳವನು, ವ್ಯಾಪಾರ ಕುಶಲನು ಆಗುತ್ತಾನೆ.

47. ಪ್ರಮಾದಿಚ: ಪ್ರಮಾದಿಚ ಸಂವತ್ಸರದಲ್ಲಿ ಜನಿಸಿದವನು ಕುಟುಂಬ ವಿರೋಧಉಳ್ಳವನು, ಪರದಾರರತನು, ಲೋಭಿ, ಪಾಪಕರ್ಮನಿರತನು, ಬುದ್ಧಿ ವಂತನು ಆಗುತ್ತಾನೆ.

48. ಆನಂದ: ಆನಂದ ಸಂವತ್ಸರದಲ್ಲಿ ಜನಿಸಿದವನು, ಆನಂದ ಸ್ವರೂ ಪನು, ತಾರ್ಕಿಕನು, ಶಾಸ್ತ್ರಗಳನ್ನು ಬಲ್ಲವನು, ಅತಿ ಚತುರನು, ಕ್ಷಮಾಗುಣ ಉಳ್ಳವನು, ಮಿತ್ರಪುತ್ರಾದಿಗಳು ಉಳ್ಳವನು ಆಗುತ್ತಾನೆ.

49. ರಾಕ್ಷಸ : ರಾಕ್ಷಸ ಸಂವತ್ಸರದಲ್ಲಿ ಜನಿಸಿದವನು, ಪಾಪಕರ್ಮ ನಿರತನು, ಕೃತಘ್ನನು, ಅನಾವಶ್ಯಕ ಮಾತುಗಳನ್ನು ಆಡುವವನು, ಹಿಂಸ್ರ ಸ್ವಭಾವದವನು, ದುಃಖಿತನು ಆಗುತ್ತಾನೆ.

50. ನಳ: ನಳ ಸಂವತ್ಸರದಲ್ಲಿ ಜನಿಸಿದವನು ಉದಾರನು, ದಾನ ಧರ್ಮ ಮಾಡುವವನು ಗುಣವಂತನು, ಶಾಂತಚಿತ್ತನು, ಸದಾಚಾರ ಉಳ್ಳವನು ಆಗುತ್ತಾನೆ.

51. ಪಿಂಗಳ: ಪಿಂಗಳ ಸಂವತ್ಸರದಲ್ಲಿ ಜನಿಸಿದವನು ಜಿತೇಂದ್ರಿಯನು, ತಪಸ್ವಿಯು, ಮಹತ್ಕಾರ್ಯಗಳನ್ನು ಸಾಧಿಸುವವನು, ಯೋಗಿಯು ಆಗುತ್ತಾನೆ.

52. ಕಾಲಯುಕ್ತಿ: ಕಾಲಯುಕ್ತಿ ಸಂವತ್ಸರದಲ್ಲಿ ಜನಿಸಿದವನು, ಲೋಕೋಪಕಾರ ಮಾಡುವವನು, ಜ್ಞಾನವಂತನು, ಸತ್ಕಾರ್ಯಗಳನ್ನು ಮಾಡುವವನು, ಸಂಪತ್ತುಉಳ್ಳವನು, ಭೋಗವಂತನು ಆಗುತ್ತಾನೆ.

53. ಸಿದ್ಧಾರ್ಥಿ: ಸಿದ್ಧಾರ್ಥಿ ಸಂವತ್ಸರದಲ್ಲಿ ಜನಿಸಿದವನು ಗುರುಹಿರಿಯರಲ್ಲಿ, ದೇವಬ್ರಾಹ್ಮಣರಲ್ಲಿ ಭಕ್ತಿ ಉಳ್ಳವನು, ಉತ್ತಮ ಗುಣಉಳ್ಳವನು, ಮೇಧಾವಿಯು ಆಗುತ್ತಾನೆ.

54. ರೌದ್ರಿ: ಸಂವತ್ಸರದಲ್ಲಿ ಜನಿಸಿದವನು ದುಃಶ್ಚರಿತ್ರ ಉಳ್ಳವನು, ಕುಶಲಮತಿಯು, ಗರ್ವಿಷ್ಠನು, ಅಲ್ಪಾಯುಷಿಯು ಆಗುತ್ತಾನೆ.

55. ದುರ್ಮತಿ: ದುರ್ಮತಿ ಸಂವತ್ಸರದಲ್ಲಿ ಜನಿಸಿದವನು ವಿಷಯಾಸಕ್ತಿ ಉಳ್ಳವನು, ಜಡಮತಿಯು, ದುಷ್ಟನು, ಶೋಕಸಂತಪ್ತನು, ಧನವಂತನು ಆಗುತ್ತಾನೆ.

56. ದುಂದುಭಿ: ದುಂದುಭಿ ಸಂವತ್ಸರದಲ್ಲಿ ಜನಿಸಿದವನು ಸ್ಥೂಲವಾದ ಅವಯವಗಳು ಉಳ್ಳವನು, ಭೋಗವಂತನು, ಉತ್ಸಾಹಉಳ್ಳವನು, ಸಂಪತ್ತು ಉಳ್ಳವನು ಆಗುತ್ತಾನೆ.

57. ರುಧಿರೋದ್ಗಾರಿ: ರುಧಿರೋದ್ಗಾರಿ ಸಂವತ್ಸರದಲ್ಲಿ ಜನಿಸಿದವನು, ಮೇಧಾವಿಯು, ಸತ್ಯವಂತನು, ಸುಖವುಳ್ಳವನು, ಧನವಂತನು ಆಗುತ್ತಾನೆ.

58. ರಕ್ತಾಕ್ಷಿ: ರಕ್ತಾಕ್ಷಿ ಸಂವತ್ಸರದಲ್ಲಿ ಜನಿಸಿದವನು ಪ್ರಶಾಂತನು, ಬಂಧುಭಾಂಧವರಿಂದ ಪ್ರೀತಿಸಲ್ಪಡುವವನು, ಭಾಗ್ಯವಂತನು, ಉತ್ತಮ ಗುಣ ಉಳ್ಳವನು ಆಗುತ್ತಾನೆ.

59. ಕ್ರೋಧನ: ಕ್ರೋಧನ ಸಂವತ್ಸರದಲ್ಲಿ ಜನಿಸಿದವನು, ದುಷ್ಕರ್ಮಗಳನ್ನು ಮಾಡುವವನು, ಬಂಧುಗಳನ್ನು ದ್ವೇಷಿಸುವವನು, ಕಾಳಸಂತೆ ವ್ಯಾಪಾರಾದಿಗಳನ್ನು ಮಾಡುವವನು, ಕ್ರೂರನು, ವಂಚಕನು ಆಗುತ್ತಾನೆ.

60. ಕ್ಷಯ: ಕ್ಷಯ ಸಂವತ್ಸರದಲ್ಲಿ ಜನಿಸಿದವನು ಸದಾಚಾರ ಸಂಪನ್ನನು, ಹಸನ್ಮುಖಿಯು, ರೂಪವಂತನು, ಮಾನವಂತನು, ರೋಗಗಳು ಇಲ್ಲದವನು, ಶತ್ರುರಹಿತನು ಆಗುತ್ತಾನೆ.

## ೬೦. ಆಯನ ಫಲ—ಋತು ಫಲ

**ಉತ್ತರಾಯಣ :** (ರಾಶಿಚಕ್ರದಲ್ಲಿ ಮಕರರಾಶಿಯಿಂದ ಮಿಥುನರಾಶಿ ವರೆಗೆ ಸೂರ್ಯನು ಸಂಚರಿಸುವಕಾಲ) ಉತ್ತರಾಯಣದಲ್ಲಿ ಜನಿಸಿದವನು ಜ್ಞಾನ ಯೋಗ ನಿರತನು. ನಿಯಮ ನಿಷ್ಠೆಗಳಿಂದ ಕೂಡಿದವನು. ಆಚಾರವಂತನು. ಸೌಮ್ಯ ಗುಣ ಉಳ್ಳವನು. ದೀರ್ಘಾಯು. ಪ್ರವೀಣನು, ದೇವಬ್ರಾಹ್ಮಣರಲ್ಲಿ ಸೇವೆಯನ್ನು ಮಾಡುವವನು. ಯಶಸ್ವಿಯೂ ಆಗುತ್ತಾನೆ.

**ದಕ್ಷಿಣಾಯನ:** (ಕರ್ಕಟಕ ರಾಶಿಯಿಂದ ಧನುರಾಶಿವರೆಗೆ ಸೂರ್ಯನು ಸಂಚರಿಸುವಕಾಲ) ದಕ್ಷಿಣಾಯನದಲ್ಲಿ ಜನಿಸಿದವನು ಅಭಿಮಾನ ಉಳ್ಳವನು. ವಾಕ್ಪಟು. ತಾರ್ಕಿಕನು, ಕ್ರೂರ ಮತಿಯೂ ಕೃಶನು. ಪಾಪಕರ್ಮ ನಿರತನು ಆಗುತ್ತಾನೆ.

**ವಸಂತಋತು :** ವಸಂತಋತುವಿನಲ್ಲಿ ಜನಿಸಿದವನು ದೀರ್ಘಾಯುವು. ಧನಿಕನು, ಸುಗಂಧ ದ್ರವ್ಯ ಪ್ರಿಯನು ಆಗುತ್ತಾನೆ.

**ಗ್ರೀಷ್ಮಋತು :** ಗ್ರೀಷ್ಮಋತುವಿನಲ್ಲಿ ಜನಿಸಿದವನು ಭೋಗವಂತನು, ಜಲದ್ರವ್ಯ ವ್ಯಾಪಾರ ಉಳ್ಳವನು, ಕೃಶವಾದ ಶರೀರ ಇರುವವನು, ಬುದ್ಧಿ ವಂತನು ಆಗುತ್ತಾನೆ.

**ವರ್ಷಋತು:** ವರ್ಷಋತುವಿನಲ್ಲಿ ಜನಿಸಿದವನು ಕ್ಷಾರವಸ್ತು, ಹಾಲು, ಲವಣಗಳಲ್ಲಿ ಪ್ರೀತಿ ಉಳ್ಳವನು, ಉತ್ತಮವಾದ ಮಾತುಗಳನ್ನು ಆಡುವವನು. ಶುಚಿರ್ಭೂತನು, ಬುದ್ಧಿವಂತನು ಆಗುತ್ತಾನೆ.

**ಶರತ್ ಋತು:** ಶರತ್‌ಋತುವಿನಲ್ಲಿ ಜನಿಸಿದವನು ಪವಿತ್ರವಾದ ಆತ್ಮ ಉಳ್ಳವನು. ಸುಖವಂತನು ಆಕರ್ಷಕ ಮುಖಉಳ್ಳವನು ಕಾಮುಕನು ಆಗುತ್ತಾನೆ.

**ಹೇಮಂತಋತು:** ಹೇಮಂತಋತುವಿನಲ್ಲಿ ಜನಿಸಿದವನು ಯೋಗಿಯು ಕೃಷವಾದ ಶರೀರ ಉಳ್ಳವನು ಕೃಷಿಕನು. ಭೋಗವಂತನು. ಸಮರ್ಥನು ಆಗುತ್ತಾನೆ.

**ಶಿಶಿರಋತು:** ಶಿಶಿರಋತುವಿನಲ್ಲಿ ಜನಿಸಿದವನು ಶುಚಿರ್ಭೂತನು. ದಾನ ಪರಾಯಣನು. ಕುಲಧರ್ಮದಂತೆ ನಡೆಯುವವನು, ಮಾನವಂತನು, ಯಶಸ್ಸು ಉಳ್ಳವನು ಆಗುತ್ತಾನೆ.

# ೬೧. ಮಾಸ ಫಲ

**ಚೈತ್ರ:** ಚೈತ್ರ ಮಾಸದಲ್ಲಿ ಜನಿಸಿದವನು ವೇದ, ಶ್ರುತಿ, ಶಾಸ್ತ್ರಾದಿಗಳ ಅಭಿರುಚಿ ಉಳ್ಳವನು, ಸದಾ ಸಂತೋಷದಿಂದ ಇರುವವನು, ಸ್ತ್ರೀ ರತನು.

**ವೈಶಾಖ:** ವೈಶಾಖ ಮಾಸದಲ್ಲಿ ಜನಿಸಿದವನು ಎಲ್ಲ ಶಾಸ್ತ್ರಗಳನ್ನು ಬಲ್ಲವನು, ಸ್ವತಂತ್ರನು, ಭೂಮಾಲೀಕನು ಆಗುತ್ತಾನೆ.

**ಜ್ಯೇಷ್ಠ:** ಜ್ಯೇಷ್ಠ ಮಾಸದಲ್ಲಿ ಜನಿಸಿದವನು, ದೀರ್ಘಾಯು, ಧನವಂತನು, ಪುತ್ರಾದಿಉಳ್ಳವನು, ಮಂತ್ರತಂತ್ರಾದಿಗಳನ್ನು ಬಲ್ಲವನು ಆಗುತ್ತಾನೆ.

**ಆಷಾಢ ಮಾಸ:** ಆಷಾಢ ಮಾಸದಲ್ಲಿ ಜನಿಸಿದವನು ಧನಾಧಿಕ್ಯಉಳ್ಳವನು, ದಯಾಳು, ಭೋಗವಂತನು, ಪರರನ್ನು ದ್ವೇಷಿಸುವವನು ಆಗುತ್ತಾನೆ.

**ಶ್ರಾವಣ:** ಶ್ರಾವಣ ಮಾಸದಲ್ಲಿ ಜನಿಸಿದವನು ದೇವ–ಬ್ರಾಹ್ಮಣರಲ್ಲಿ ಭಕ್ತಿ ಉಳ್ಳವನು, ಪೂಜಿಸಲ್ಪಡುವವನು ಆಗುತ್ತಾನೆ.

**ಭಾದ್ರಪದ:** ಭಾದ್ರಪದ ಮಾಸದಲ್ಲಿ ಜನಿಸಿದವನು ವಿದೇಶಸಂಚಾರದಲ್ಲಿ ನಿರತನು, ತಂತ್ರಬಲ್ಲವನು, ಸದಾ ಆಲೋಚನೆಯಲ್ಲಿ ತತ್ಪರನು ಆಗುತ್ತಾನೆ.

**ಆಶ್ವಯುಜ:** ಆಶ್ವಯುಜ ಮಾಸದಲ್ಲಿ ಜನಿಸಿದವನು ಸ್ವಜನರನ್ನು ದ್ವೇಷಿಸುವವನು, ದರಿದ್ರನು, ದುಷ್ಟನು ಆಗುತ್ತಾನೆ.

**ಕಾರ್ತಿಕ:** ಕಾರ್ತಿಕ ಮಾಸದಲ್ಲಿ ಜನಿಸಿದವನು ಕೃಷಿಕನು, ಅಗಲವಾದ ಕಣ್ಣುಗಳು ಉಳ್ಳವನು, ಧನಾಧಿಕ್ಯಉಳ್ಳವನು ಆಗುತ್ತಾನೆ.

**ಮಾರ್ಗಶಿರ:** ಮಾರ್ಗಶಿರ ಮಾಸದಲ್ಲಿ ಜನಿಸಿದವನು ಧಾರ್ಮಿಕನು, ಗುರುಹಿರಿಯಲ್ಲಿ ಭಕ್ತಿ ಉಳ್ಳವನು ಆಗುತ್ತಾನೆ,

**ಪುಷ್ಯ:** ಪುಷ್ಯ ಮಾಸದಲ್ಲಿ ಜನಿಸಿದವನು ಬಲಶಾಲಿ, ಧನಉಳ್ಳವನು, ಗುಣವಂತನು, ಮಾನವಂತನು ಆಗುತ್ತಾನೆ.

**ಮಾಘ:** ಮಾಘ ಮಾಸದಲ್ಲಿ ಜನಿಸಿದವನು ದುಷ್ಟಮತಿಯು ಆದರೆ ಧಾರ್ಮಿಕ ಪ್ರವೃತ್ತಿ ಉಳ್ಳವನು ಆಗುತ್ತಾನೆ.

**ಫಾಲ್ಗುಣ:** ಫಾಲ್ಗುಣ ಮಾಸದಲ್ಲಿ ಜನಿಸಿದವನು ಸಂಗೀತ ಪ್ರಿಯನು, ಸಂಚಾರ ಉಳ್ಳವನು ಆಗುತ್ತಾನೆ.

## ೬೨. ಪಕ್ಷ ಫಲ—ವಾರಫಲ

**ಶುಕ್ಲಪಕ್ಷ:** ಶುಕ್ಲಪಕ್ಷದಲ್ಲಿ ಜನಿಸಿದವನು ಪುತ್ರಪೌತ್ರಾದಿಉಳ್ಳವನು, ಧನವಂತನು, ಧರ್ಮಪರಾಯಣನು. ದಯಾಳುವು ಆಗುತ್ತಾನೆ

**ಕೃಷ್ಣಪಕ್ಷ:** ಕೃಷ್ಣಪಕ್ಷದಲ್ಲಿ ಜನಿಸಿದವನು ಮಾತೃಭಕ್ತಿಉಳ್ಳವನು, ಬಂಧುಗಳನ್ನು ದ್ವೇಷಿಸುವವನು, ತನ್ನ ಹಿತಕಾರ್ಯಗಳಲ್ಲಿ ಮಗ್ನನಾದವನು ಆಗುತ್ತಾನೆ.

**ಆದಿತ್ಯವಾರ:** ಆದಿತ್ಯವಾರ ಜನಿಸಿದವನು ಮಾನವಂತನು, ಸಿಂಗಲ ವರ್ಣದಕಣ್ಣು, ಕೂದಲು ಉಳ್ಳವನು, ಬಲಿಷ್ಠನು, ಶ್ರೇಷ್ಠನು, ಸಮರ್ಥನು ಆಗುತ್ತಾನೆ.

**ಸೋಮವಾರ:** ಸೋಮವಾರ ಜನಿಸಿದವನು ವಿಷಯಾಸಕ್ತನು, ಕಾಂತಿ ಯುತ ಶರೀರ ಉಳ್ಳವನು, ದಯಾಳುವು ಆಗುತ್ತಾನೆ.

**ಮಂಗಳವಾರ:** ಮಂಗಳವಾರ ಜನಿಸಿದವನು ಕ್ರೂರನು, ಸಾಹಸಿಗನು, ಸದಾ ವಾದವಿವಾದಗಳಲ್ಲಿ ನಿರತನು ಆಗುತ್ತಾನೆ.

**ಬುಧವಾರ:** ಬುಧವಾರ ಜನಿಸಿದವನು ದೇವಬ್ರಾಹ್ಮಣನಲ್ಲಿ ಭಕ್ತಿ ಉಳ್ಳವನು, ಉತ್ತಮವಾದ ಮಾತುಗಳನ್ನು ಆಡುವವನು ಆಗುತ್ತಾನೆ.

**ಗುರುವಾರ:** ಗುರುವಾರ ಜನಿಸಿದವನು ಯಾಗಯಜ್ಞಾದಿ ಪುಣ್ಯಗಳನ್ನು ಮಾಡುವವನು, ಭೂಪಾಲ್ಪಿಕನು ಅಥವಾ ಮಾಂಡಲಿಕನು, ಗುಣವಂತನು, ಖ್ಯಾತವಂತನು ಆಗುತ್ತಾನೆ.

**ಶುಕ್ರವಾರ:** ಶುಕ್ರವಾರ ಜನಿಸಿದವನು ಧನ, ಧಾನ್ಯ, ಭೂಸಂಪತ್ತು ಉಳ್ಳವನು, ಎಲ್ಲರಿಂದ ಪ್ರೀತಿಸಲ್ಪಡುವವನು, ವಿಷಯಾಸಕ್ತಿ ಉಳ್ಳವನು ಆಗುತ್ತಾನೆ.

**ಶನಿವಾರ:** ಶನಿವಾರ ಜನಿಸಿದವನು ದ್ವೇಷಉಳ್ಳವನು, ಬಂಧು ಜನ ರೊಡನೆ ಕಲಹಉಳ್ಳವನು, ಪರಧನ, ಪರಾಶ್ರಯದಲ್ಲಿ ಇರುವವನು, ವಾದ ವಿವಾದ ಮಾಡುವವನು, ಪ್ರೌಢನಾದ ಮೇಲೆ ಬುದ್ಧಿವಂತನು ಆಗುತ್ತಾನೆ.

ಪಾಢ್ಯ : ಪಾಢ್ಯದಲ್ಲಿ ಜನಿಸಿದವನು ಮಹೋನ್ನತ ಕಾರ್ಯಗಳನ್ನು ಮಾಡುವವನು, ಸಚ್ಚರಿತ್ರನು ಆಗುತ್ತಾನೆ.

ಬಿದಿಗೆ : ಬಿದಿಗೆಯಲ್ಲಿ ಜನಿಸಿದವನು ತೇಜಸ್ವಿಯು, ಪಶುಸಂಪತ್ತು ಉಳ್ಳವನು, ಗುಣವಂತನು, ಪುಣ್ಯವಂತನು ಆಗುತ್ತಾನೆ.

ತದಿಗೆ: ತದಿಗೆಯಲ್ಲಿ ಜನಿಸಿದವನು ವಾಕ್ಪಟುತ್ವ ಉಳ್ಳವನು, ಭಯ ಉಳ್ಳವನು, ಗುಣವಂತನು, ಪುಣ್ಯವಂತನು ಆಗುತ್ತಾನೆ.

ಚತುರ್ಥಿ: ಚತುರ್ಥಿಯಲ್ಲಿ ಜನಿಸಿದವನು ಆಶೆ ಉಳ್ಳವನು, ಸಂಚಾರಿಯು, ಚತುರನು, ಮಂತ್ರಶಾಸ್ತ್ರಗಳಲ್ಲಿ ನಿಪುಣನು ಆಗುತ್ತಾನೆ.

ಪಂಚಮಿ: ಪಂಚಮಿಯಲ್ಲಿ ಜನಿಸಿದವನು ಶ್ರುತಿಶಾಸ್ತ್ರಗಳಲ್ಲಿ ತಲ್ಲೀನನು, ವಿಷಯಾಭಿಲಾಷಿ, ದೃಢನಿಶ್ಚಯ ಉಳ್ಳವನು, ಕೃಶವಾದ ಶರೀರ ಉಳ್ಳವನು ಆಗುತ್ತಾನೆ.

ಷಷ್ಠಿ: ಷಷ್ಠಿಯಲ್ಲಿ ಜನಿಸಿದವನು ಅಪ್ಪವಾದ ಬಲ ಉಳ್ಳವನು, ರಾಜತುಲ್ಯನು ಮೇಧಾವಿಯು, ಅಧಿಕ ಕೋಪ ಉಳ್ಳವನು ಆಗುತ್ತಾನೆ.

ಸಪ್ತಮಿ: ಸಪ್ತಮಿಯಲ್ಲಿ ಜನಿಸಿದವನು ತೀಕ್ಷ್ಣವಾದ ಮಾತುಗಳನ್ನು ಆಡುವವನು, ಜನನಾಯಕನು, ಕಫಪ್ರಕೃತಿಯವನು, ಬಲಿಷ್ಠನು ಆಗುತ್ತಾನೆ.

ಅಷ್ಟಮಿ : ಅಷ್ಟಮಿಯಲ್ಲಿ ಜನಿಸಿದವನು ಅತಿಕಾಮುಕನು, ಪತ್ನಿ ಪುತ್ರರಲ್ಲಿ ಅಧಿಕ ಆಸಕ್ತಿ ಉಳ್ಳವನು, ಕಫ ಪ್ರಕೃತಿಯವನು ಆಗುತ್ತಾನೆ.

ನವಮಿ: ನವಮಿಯಲ್ಲಿ ಜನಿಸಿದವನು ಪ್ರಖ್ಯಾತನು, ದಿವ್ಯವಾದ ಶರೀರ ಉಳ್ಳವನು, ದುಷ್ಟಸ್ತ್ರೀ, ಪುತ್ರರು ಉಳ್ಳವನು, ವಿಷಯಾಸಕ್ತನು ಆಗುತ್ತಾನೆ.

ದಶಮಿ : ದಶಮಿಯಲ್ಲಿ ಜನಿಸಿದವನು ಧರ್ಮಪರಾಯಣನು, ವಾಕ್ಪಟುತ್ವ ಉಳ್ಳವನು, ಪತ್ನಿ ಪುತ್ರರು ಉಳ್ಳವನು, ಶ್ರೀಮಂತನು, ಅಭಿವೃದ್ಧಿ ಹೊಂದುವವನು, ಸಂಪತ್ತು ಉಳ್ಳವನು ಆಗುತ್ತಾನೆ.

ಏಕಾದಶಿ: ಏಕಾದಶಿಯಲ್ಲಿ ಜನಿಸಿದವನು ದೇವ ಬ್ರಾಹ್ಮಣರಲ್ಲಿ ಭಕ್ತಿ ಉಳ್ಳವನು, ಭೃತ್ಯರು ಉಳ್ಳವನು, ಧನವಂತನು ಆಗುತ್ತಾನೆ.

**ದ್ವಾದಶಿ:** ದ್ವಾದಶಿಯಲ್ಲಿ ಜನಿಸಿದವನು ಪುಣ್ಯಕಾರ್ಯಗಳನ್ನು ಮಾಡು ವವನು, ತ್ಯಾಗವಂತನು, ಧನವಂತನು, ಪಂಡಿತನು ಆಗುತ್ತಾನೆ.

**ತ್ರಯೋದಶಿ :** ತ್ರಯೋದಶಿಯಲ್ಲಿ ಜನಿಸಿದವನು ಲೋಭಿಯು, ವಿಷಯಾಸಕ್ತಿಉಳ್ಳವನು, ಧನವಂತನು ಆಗುತ್ತಾನೆ.

**ಚತುರ್ದಶಿ:** ಚತುರ್ದಶಿಯಲ್ಲಿ ಜನಿಸಿದವನು ಕೋಪಿಷ್ಟನು, ಪರಧನ, ಪರಸ್ತ್ರೀ ಅಪೇಕ್ಷೆಉಳ್ಳವನು ಆಗುತ್ತಾನೆ.

**ಅಮಾವಾಸ್ಯೆ:** ಅಮಾವಾಸ್ಯೆಯಂದು ಜನಿಸಿದವನು ಪಿತೃ ದೇವತಾ ರಾಧನೆಗಳಲ್ಲಿ ತತ್ಪರನಾದವನು, ನವೀನತೆಯನ್ನು ಕಂಡುಹಿಡಿಯುವವನು, ಯಾಂತ್ರಿಕ ಕೆಲಸಗಳಲ್ಲಿ ಕುಶಲನು ಆಗುತ್ತಾನೆ.

**ಹುಣಿಮೆ:** ಹುಣಿಮೆಯಂದು ಜನಿಸಿದವನು ಧನವಂತನು, ಉತ್ತಮ ಮನಸ್ಸು ಉಳ್ಳವನು, ಕುಲದಲ್ಲಿ ಯಶಸ್ಸನ್ನು ಗಳಿಸುವವನು ಆಗುತ್ತಾನೆ.

## ೬೪. ಕಾಲಫಲ

**ಪ್ರಾತಃಕಾಲ:** ಪ್ರಾತಃಕಾಲದಲ್ಲಿ ಜನಿಸಿದವನು ಸ್ವ ಧರ್ಮನಿರತನು, ಉತ್ತಮ ಕಾರ್ಯಗಳನ್ನು ಮಾಡುವವನು, ಸುಖವಂತನು ಆಗುತ್ತಾನೆ.

**ಮಧ್ಯಾಹ್ನ:** ಮಧ್ಯಾಹ್ನದಲ್ಲಿ ಜನಿಸಿದವನು ರಾಜಸಮಾನ ಗುಣಉಳ್ಳ ವನು ಆಗುತ್ತಾನೆ.

**ಅಪರಾಹ್ನ:** ಅಪರಾಹ್ನದಲ್ಲಿ ಜನಿಸಿದವನು ಧನವಂತನು ಆಗುತ್ತಾನೆ.

**ಸಾಯಂಕಾಲ ಮತ್ತು ರಾತ್ರಿ:** ಸಾಯಂಕಾಲ ಮತ್ತು ರಾತ್ರಿಯಲ್ಲಿ ಜನಿಸಿದವನು ಸುಗಂಧ ದ್ರವ್ಯಪ್ರಿಯನು, ಸ್ತ್ರೀಲೋಲನು, ದುಷ್ಟನು ಮತ್ತು ಅಟನನು ಆಗುತ್ತಾನೆ.

**ಸೂರ್ಯೋದಯ:** ಸೂರ್ಯೋದಯ ಕಾಲದಲ್ಲಿ ಜನಿಸಿದವನು ಅನೇಕ ವಿಧವಾದ ಸುಖಸೌಖ್ಯಗಳನ್ನು ಅನುಭವಿಸುವವನು ಆಗುತ್ತಾನೆ.

# ಗ್ರಹರ ಶುಭಾಶುಭ ಫಲ ನಿರ್ಣಯು ಕೋಷ್ಟಕ

| ಲಗ್ನ | ಪಾಪಗ್ರಹರು | ಶುಭ ಗ್ರಹರು | ಮಾರಕ ಗ್ರಹರು | ಯೋಗಕಾರಕ ಗ್ರಹರು |
|---|---|---|---|---|
| ಮೇಷ | ಶನಿ, ಬುಧ, ಶುಕ್ರ | ಗುರು, ರವಿ | ಶನಿ, ಬುಧ, ಶುಕ್ರ | — |
| ವೃಷಭ | ಗುರು, ಶುಕ್ರ, ಚಂದ್ರ | ಶನಿ, ರವಿ, ಬುಧ | ಗುರು, ಶುಕ್ರ, ಚಂದ್ರ | ಶನಿ |
| ಮಿಥುನ | ಕುಜ, ಗುರು, ರವಿ | ಶುಕ್ರ | ಗುರು, ಕುಜ | ಬುಧ, ಶುಕ್ರ, ಯುತಿ |
| ಕರ್ಕಟಕ | ಶುಕ್ರ, ಬುಧ, ಶನಿ | ಕುಜ, ಗುರು | ಶನಿ, ಶುಕ್ರ | ಕುಜ |
| ಸಿಂಹ | ಬುಧ, ಶುಕ್ರ | ಕುಜ | ಬುಧ, ಶುಕ್ರ | ಕುಜ, ಗುರು, ಕುಜಯುತಿ |
| ಕನ್ಯಾ | ಕುಜ, ಗುರು, ಚಂದ್ರ | ಶುಕ್ರ | ಕುಜ, ಗುರು | ಶುಕ್ರ-ಬುಧ ಯುತಿ |
| ತುಲಾ | ಗುರು, ರವಿ, ಕುಜ | ಶನಿ, ಬುಧ, ಶುಕ್ರ | ಕುಜ, ಗುರು | ಶನಿ, ಚಂದ್ರ-ಬುಧಯುತಿ |
| ವೃಶ್ಚಿಕ | ಬುಧ, ಶನಿ, ಶುಕ್ರ | ಗುರು, ಚಂದ್ರ | ಗುರು, ಶುಕ್ರ, ಬುಧ | ರವಿ-ಚಂದ್ರ ಯುತಿ |
| ಧನು | ಶುಕ್ರ | ರವಿ, ಕುಜ | ಶನಿ, ಶುಕ್ರ | ರವಿ-ಬುಧ ಯುತಿ |
| ಮಕರ | ಕುಜ, ಗುರು, ಚಂದ್ರ | ಶುಕ್ರ, ಬುಧ | ಗುರು, ಕುಜ | ಶುಕ್ರ |
| ಕುಂಭ | ಗುರು, ಚಂದ್ರ, ಕುಜ | ಶುಕ್ರ | ಕುಜ, ಗುರು, ಚಂದ್ರ | ಶುಕ್ರ-ಕುಜ ಯುತಿ |
| ಮೀನ | ಬುಧ, ಶುಕ್ರ, ಶನಿ, ರವಿ | ಚಂದ್ರ, ಕುಜ | ಶನಿ, ಶುಕ್ರ, ಬುಧ | ಕುಜ-ಗುರು ಯುತಿ |

# ನವಾಂಶ ಕೋಷ್ಟಕ

| ರಾಶಿ | ಮೇಷ, ಸಿಂಹ, ಧನು | | ವೃಷಭ, ಕನ್ಯಾ, ಮಕರ | | ಮಿಥುನ, ತುಲಾ, ಕುಂಭ | | ಕರ್ಕಟಕ, ವೃಶ್ಚಿಕ, ಮೀನ | |
|---|---|---|---|---|---|---|---|---|
| ಪರಿಮಾಣ | ನವಾಂಶಾಧಿಪ | ರಾಶ್ಯಂಶ | ನವಾಂಶಾಧಿಪ | ರಾಶ್ಯಂಶ | ನವಾಂಶಾಧಿಪ | ರಾಶ್ಯಂಶ | ನವಾಂಶಾಧಿಪ | ರಾಶ್ಯಂಶ |
| 1. 1°0′ 3°20′ | ಕುಜ | ಮೇಷ | ಶನಿ | ಮಕರ | ಶುಕ್ರ | ತುಲಾ | ಚಂದ್ರ | ಕರ್ಕಟಕ |
| 2. 3°21′ 6°40′ | ಶುಕ್ರ | ವೃಷಭ | ಶನಿ | ಕುಂಭ | ಕುಜ | ವೃಶ್ಚಿಕ | ರವಿ | ಸಿಂಹ |
| 3. 6°41′ 10° | ಬುಧ | ಮಿಥುನ | ಗುರು | ಮೀನ | ಗುರು | ಧನು | ಬುಧ | ಕನ್ಯಾ |
| 4. 10°01′ 13°20′ | ಚಂದ್ರ | ಕರ್ಕಟಕ | ಕುಜ | ಮೇಷ | ಶನಿ | ಮಕರ | ಶುಕ್ರ | ತುಲಾ |
| 5. 13°21′ 16°40′ | ರವಿ | ಸಿಂಹ | ಶುಕ್ರ | ವೃಷಭ | ಶನಿ | ಕುಂಭ | ಕುಜ | ವೃಶ್ಚಿಕ |
| 6. 16°41′ 20° | ಬುಧ | ಕನ್ಯಾ | ಬುಧ | ಮಿಥುನ | ಗುರು | ಮೀನ | ಗುರು | ಧನು |
| 7. 20°21′ 23°20′ | ಶುಕ್ರ | ತುಲಾ | ಚಂದ್ರ | ಕರ್ಕಟಕ | ಕುಜ | ಮೇಷ | ಶನಿ | ಮಕರ |
| 8. 23°21′ 26°20′ | ಕುಜ | ವೃಶ್ಚಿಕ | ರವಿ | ಸಿಂಹ | ಶುಕ್ರ | ವೃಷಭ | ಶನಿ | ಕುಂಭ |
| 9. 26°41′ 30° | ಗುರು | ಧನು | ಬುಧ | ಕನ್ಯಾ | ಬುಧ | ಮಿಥುನ | ಗುರು | ಮೀನ |

## 2. ಮೇಳಾಮೇಳಿ

( ತೃತೀಯಾವೃತ್ತಿ )

( ವಧೂವರರ ಜ್ಯೋತಿಷ ಗ್ರಂಥ )

ಜಾತಕ ಘಟನೆಯಲ್ಲಿ ಉಪಯುಕ್ತ ೧೮ ಕೂಟಗಳ ವಿವೇಚನೆ, ಬಲಾಬಲ ಪರಿಶೀಲನೆ, ದಶಾಸಂಧಿಶೋಧನೆ, ಕುಜದೋಷ ಮತ್ತು ಅಪವಾದ, ಯೋಗಾವಳಿ, ವೈಧವ್ಯಯೋಗ, ವಿವಾಹ ಮುಹೂರ್ತ, ವಿವಾಹ ಕಾಲದ ಗ್ರಹಸ್ಥಿತಿ, ಸಪ್ತಮ ಭಾವವಿಚಾರ, ಕಳತ್ರನಾಶಯೋಗ, ದ್ವಿಭಾರ್ಯಾಯೋಗ, ವಿವಾಹ ವಿಚ್ಛೇದನ, ಪ್ರೇಮವಿವಾಹ, ಅಂತರ್ಜಾತೀಯ ವಿವಾಹ, ವಿವಾಹಕಾಲ, ಗೋಧೂಳಿ ಮತ್ತು ಅಭಿಜಿನ್ ಲಗ್ನವಿಚಾರ, ಋಣಾನುಬಂಧ ಇತ್ಯಾದಿ ವಿಚಾರ ಮಾದರಿ ಜಾತಕ ಮತ್ತು ಆಧಾರ ಶ್ಲೋಕಗಳಿಂದ ವಿವರಿಸಿ ಬರೆದಿರುತ್ತದೆ. ವಿವಾಹ ಪ್ರಶ್ನೆವಿಚಾರ ಪ್ರಶ್ನಮಾರ್ಗ ಗ್ರಂಥದ ಅಧ್ಯಾಯ ೧೭ ಮತ್ತು ೨೦ರ ಕೆಲವು ಮೂಲಶ್ಲೋಕ ಮತ್ತು ಅನುವಾದವನ್ನು ವಿದ್ಯಾರ್ಥಿಗಳಿಗೆ ಉಪಯುಕ್ತ ಆಗುವಂತೆ ಬರೆದಿರುತ್ತದೆ. ಸುಗಮ ದಾಂಪತ್ಯ ಜೀವನಕ್ಕೆ ಸಹಾಯಕ ಅದ್ವಿತೀಯ ಜ್ಯೋತಿಷಗ್ರಂಥ.

ಪುಟ 172 ಬೆಲೆ ರೂ. 54–00

## 4. ಗುಳಿಕ ( ಮಾಂದಿ ) ಉಪಗ್ರಹರು

ಗುಳಿಕಸ್ವರೂಪ, ಗುಳಿಕಶೋಧನೆ, ಲಗ್ನಾದಿಭಾವಸ್ಥಿತ ಮಾಂದಿಫಲ, ದತ್ತಪುತ್ರಯೋಗ, ಸಂತಾನದೋಷ, ಗುಳಿಕನಿಂದ ಸೂಚಿತರೋಗಗಳು, ಅವಸಾನಕಾಲ, ಗುಳಿಕಯುತಿಫಲ, ಉಪಗ್ರಹರು ಹಾಗೂ ಅವರಿಂದ-ಸೂಚಿತಫಲ ಲಗ್ನಸ್ಫುಟ ಮತ್ತು ಗ್ರಹಸ್ಫುಟಸಾಧನೆ, ಉಪಗ್ರಹಶೋಧನೆ, ಗುಳಿಕ-ರೋಗ ಪ್ರಶ್ನೆ, ಜನನ ಕಾಲದ ಜಾತಕ ತಯಾರಿಸುವ ಕ್ರಮ, ಆರೂಢ (ಪದ) ಸಾಧನೆ ಮತ್ತು ಫಲ, ಆತ್ಮಕಾರಕ ಗ್ರಹ, ಕಾರಕಾಂಶಫಲ ಇತ್ಯಾದಿ ವಿಚಾರ ಮಾದರಿ ಜಾತಕ ಮತ್ತು ಪರಾಶರಹೋರಾ, ಫಲದೀಪಿಕಾ, ಪ್ರಶ್ನಮಾರ್ಗ ಮೊದಲಾದ ಪ್ರಾಚೀನ ಗ್ರಂಥಗಳಿಂದ ಆಯ್ದ ಶ್ಲೋಕಗಳನ್ನು ವಿವರಿಸಿ ಬರೆದ ಈ ಚಿಕ್ಕ ಗ್ರಂಥವು ಜ್ಯೋತಿಷ ವಿದ್ಯಾರ್ಥಿಗಳಿಗೆ ಉಪಯುಕ್ತ ಆಗಿರುತ್ತದೆ.

ಪುಟ 124

ಅತ್ಯಂತ ಉಪಯುಕ್ತ ಗ್ರಂಥ ಆಗಿರುತ್ತದೆ. ಸಾರಾವಲೀ ಗ್ರಂಥದ ಮೊದಲನೇ 12 ಅಧ್ಯಾಯಗಳ 425 ಮೂಲಶ್ಲೋಕ ಮತ್ತು ಅನುವಾದವನ್ನು ಪ್ರಥಮವಾಗಿ ಈ ಗ್ರಂಥದಲ್ಲಿ ಪ್ರಕಾಶಿಸಿರುತ್ತೇವೆ.

1. ಶಾಸ್ತ್ರವತಾರ ಅಧ್ಯಾಯ (ಸೂರ್ಯನ ಪ್ರಾಮುಖ್ಯತೆ ಮತ್ತು ಪ್ರಾರ್ಥನೆ) 2. ಹೋರಾಶಬ್ದಾರ್ಥಚಿಂತಾ ಅಧ್ಯಾಯ, (ಹೋರಾಶಬ್ದ ಪ್ರಾಮುಖ್ಯತೆ ಮತ್ತು ಉಪಯುಕ್ತತೆ) 3. ರಾಶಿಬೇಧ ಅಧ್ಯಾಯ, (ರಾಶಿ ಸ್ವರೂಪಾದಿ ಗುಣ ಧರ್ಮ ಮತ್ತು ಗ್ರಹ ಉಚ್ಚಾದಿ ವರ್ಗ) 4. ಗ್ರಹಗುಣಾಧ್ಯಾಯ. (ಗ್ರಹರ ದೀಪ್ತಾದಿ ಅವಸ್ಥೆ, ದಶಾವಿಭಾಗ). 5. ಯೋಗಕಾರಕಾಧ್ಯಾಯ, (ಪರಸ್ಪರ ಕೇಂದ್ರಗತ ಕಾರಕಗ್ರಹಫಲ) 6. ಕಾರಕಾಧ್ಯಾಯ. (ಕಾಲಗಣನೆ, ಗ್ರಹರದ್ರವ್ಯಾದಿ) 7. ಆಧಾನಾಧ್ಯಾಯ, (ಗರ್ಭವಿಚಾರ ಅವುಳಿತ್ರಿವಳಿ ಮತ್ತು ವಿಕೃತ ಜನನ) 8. ಜನ್ಮ ವಿಧಾನಾಧ್ಯಾಯ, (ಪ್ರಸವ ವಿಧಾನ ಶಿಶುವಿನ ಆಕೃತಿ ಆದಿ) 9. ಅರಿಷ್ಟಾಧ್ಯಾಯ, (ಸದ್ಯೋಮರಣಾದಿ ಅರಿಷ್ಟಯೋಗ, ಚಂದ್ರನ ಮೃತ್ಯುಭಾಗಾದಿ) 10. ಚಂದ್ರಾರಿಷ್ಟಭಂಗಾಧ್ಯಾಯ (ಚಂದ್ರನ ಸಂಬಂಧ, ಶಾಂತಿ ದೃಷ್ಟಿ ಇತ್ಯಾದಿ) 11. ಸಕಲಾರಿಷ್ಟಭಂಗಾಧ್ಯಾಯ. (ಬಲಿಷ್ಠ ಗುರು ಶುಭಗ್ರಹರಿಂದ ಮತ್ತು 3,6,11 ರ ಪಾಪಗ್ರಹರಿಂದ ಅರಿಷ್ಟಭಂಗ)

ಇತಿ ಸಾರಾವಲೀ 12 ಅಧ್ಯಾಯಗಳು (425 ಶ್ಲೋಕಗಳು) ಪುಟ: **105** ಬೆಲೆ ರೂ. **40-00**

ಸಾರಾವಲೀ (ದ್ವಿತೀಯ ಭಾಗ)

1. ಚಂದ್ರಯೋಗಗಳು - 35 ಸುನಫಾ, ದುರಧರಾ, ಕೇಮದ್ರುಮ, ವಸುಮತೀ, ಆದಿಯೋಗ ಮತ್ತು ಧನಯೋಗ, 2. ಸೂರ್ಯಯೋಗಗಳು, 12 ವೇಶಿವಾಶಿ ಮತ್ತು ಉಭಯಚರಿಯೋಗಗಳು - 3. ದ್ವಿಗ್ರಹಯೋಗಗಳು - 23. 4. ತ್ರಿಗ್ರಹಯೋಗಗಳು-38 5. ಚತುರ್ಗ್ರಹಯೋಗಗಳು -35. 6. ಪಂಚಗ್ರಹಯೋಗಗಳು-22.7. ಷಟ್ ಗ್ರಹಯೋಗಗಳು-8. ಸಪ್ತಗ್ರಹ ಯೋಗ, ಬೃಹಜ್ಜಾತಕ ದ್ವಿಗ್ರಹಯೋಗ 81. ಪ್ರವ್ರಜ್ಯಾ (ಸಂನ್ಯಾಸಯೋಗಗಳು-37. 9. ನಾಭಸಯೋಗಗಳು 32. (ನೌಯೋಗ, ಛತ್ರಯೋಗ, ಕೂಟಯೋಗ ಕಾರ್ಮುಕಯೋಗ (ಚಾಪಯೋಗ), ಅರ್ಧಚಂದ್ರ ಯೋಗ, ವಜ್ರಯೋಗ, ಯುವಯೋಗ, ಕಮಲಯೋಗ, ವಾಪೀಯೋಗ, ಶಕಟಯೋಗ, ವಿಹಗಯೋಗ, ಗದಾಯೋಗ, ಶೃಜ್ಗಾಟಕಯೋಗ, ಹಲಯೋಗ, ಚಕ್ರಯೋಗ, ಸಮುದ್ರಯೋಗ, ಯೂಪಯೋಗ, ಶರಯೋಗ, ಶಕ್ತಿಯೋಗ, ದಂಡಯೋಗ, ಮಾಲಾಯೋಗ, ಸರ್ಪಯೋಗ, ರಜ್ಜುಯೋಗ, ಮುಸಲಯೋಗ, ನಲಯೋಗ, ಗೋಲಯೋಗ, ಯುಗಯೋಗ, ಶೂಲಯೋಗ, ಕೇದಾರಯೋಗ, ಪಾಶಯೋಗ, ದಾಮಿನಿಯೋಗ, ವೀಣಾಯೋಗ) 10. ಆದಿತ್ಯಚಾರ-ದೃಷ್ಟಿಯೋಗ, (ಮೇಷಾದಿ ದ್ವಾದಶರಾಶಿಸ್ಥಿತ ಸೂರ್ಯನ ಫಲ) 11. ಚಂದ್ರಚಾರ ದೃಷ್ಟಿಯೋಗ, (ಮೇಷಾದಿ ದ್ವಾದಶರಾಶಿಸ್ಥಿತ ಚಂದ್ರನ ಫಲ) 12. ಚಂದ್ರನವಾಂಶಚಾರಾಧ್ಯಾಯ

12 ಅಧ್ಯಾಯಗಳು (437 ಶ್ಲೋಕಗಳು) ಪುಟ **122** ಬೆಲೆ ರೂ. **50-00**